# ಜೀವನ್ ಹನುಮರಿಗೆ ಪರಿಚಯವಾದ

## ಪ್ರಪಂಚದ ಅತ್ಯಂತ ಮಾನವೀಯ ಜೀವಿಗಳು.



ಒಣಹುಲ್ಲು ಒಯ್ಯುವಾಗ 'ಮಾರ್ಮೊಟು'ಗಳು ತಮ್ಮಲೊಂದನ್ನು ಬಂಡಿಯಂತೆ ಉಪಯೋಗಿಸಿ ಕೊಳ್ಳುತ್ತವೆ. ಉಳಿದವು ಅದರ ಬಾಲ ಹಿಡಿದು ಅದನ್ನು ಎಳೆಯುತ್ತವೆ.

'ಸ್ಕೂಲ್ ಮಾಸ್ಟರ' ಮೀನನ್ನು ಅತಿಚಿಕ್ಕ ಮೀನುಗಳ ಗುಂಪೊಂದು ಸದಾ ಹಿಂಬಾಲಿಸುತ್ತಿರುತ್ತದೆ. ವಿದ್ಯೆಗಾಗಿ? ಅಲ್ಲ ಆಹಾರಕ್ಕಾಗಿ. ಅದು ಹೋದ ದಾರಿಯಲ್ಲಿ ಚೆಲ್ಲಾಪಿಲ್ಲಿ ಯಾಗುವ ಸೂಕ್ಷ್ಮ ಜಲಚರ ಜಂತುಗಳೇ ಅವುಗಳ ಆಹಾರ.



ಮುಂಗೋಪಿ 'ಪೀರ್ ನೀರಾನೆ' ತನ್ನ ನಿದ್ರಾಭಂಗ ಮಾಡಿದವರ ಮೇಲೆ ಕಲ್ಲುಗುಂಡುಗಳ ಮಳೆಯನ್ನೇ ಸುರಿಸುತ್ತದೆ.





ಆಹಾರಕ್ಕಾಗಿ ಮರಹತ್ತ ಬೇಕಾದಾಗ 'ಸೀವೆಟಿಲ್' ತನ್ನ ಕೆಳಕ್ಕಿಳಿಯುವ ದಾರಿಯ ಪೂರ್ವಸಿದ್ಧತೆ ಮಾಡುತ್ತಲೇ ಮೇಲಕ್ಕೇರುತ್ತದೆ; ಮರದ ಕೊಂಬೆಗಳನ್ನು ಕಚ್ಚಿ ಕೆಳಕ್ಕಿಳಿಯುವಾಗ ತನಗೆ ಅನುಕೂಲವಾಗುವಂತಹ ಚಿಕ್ಕ ಕುಟ್ಟಿಗಳನ್ನಾಗಿ ಮಾಡಿರುತ್ತದೆ.

'ಊದು ಬಿಲಾವು' ತಮ್ಮ ವಾಸಸ್ಥಾನ ಹಾಗೂ ನೀರಿನ ಕಟ್ಟೆಗಳಿಗೆ ನೆರೆನೀರಿನಿಂದ ಅಪಾಯ ಒದಗಿದಾಗ ನೀರಿನ ಕಟ್ಟೆಗಳ ತುದಿಯಲ್ಲಿ ಪ್ರತ್ಯೇಕವಾಗಿ ತಯಾರಿಸಿಟ್ಟ ಚೆಲ್ಲುದಾರಿಯನ್ನು ತೆರೆದು ನೆರೆನೀರು ಉಪದ್ರವಿಲ್ಲದೆ ಹರಿದು ಹೋಗುವಂತೆ ಮಾಡುತ್ತವೆ.





ಜೀವವಿಮೆ ನಿಮ್ಮ ಆಸ್ತಿಪಾಸ್ತಿ ಗಳನ್ನು ರಕ್ಷಿಸುವ ಶ್ರೇಷ್ಠ ಸುಲಭ ಉಪಾಯ ಅದರ ಪರಿಚಯ ಬೆಳೆಸಿರಿ.



ಭಾರತೀಯ ಜೀವವಿಮಾ ನಿಗಮ

daCunha-LIC-103-KN

ಮುಂದಿನ ಸಲ: ಜೀವನ್ ಹನುಮರು ತಮ್ಮ ಭವಿಷ್ಯವನ್ನು ಸುಭದ್ರಗೊಳಿಸುವ ವಿಧಾನದ ಬಗ್ಗೆ ಚರ್ಚಿಸುವರು.

ಡಾಕ್ಟರ್, ನನ್ನ ಮಗೂಗೆ
ಮೈ ಚೆನ್ನಾಗಿಲ್ಲ, ತುಂಬಾ
ಸೊರಗಿದಾಳೆ. ಏನೂಂತ
ಸ್ವಲ್ಪ ನೋಡ್ತೀರಾ, ಪ್ಲೀಸ್?

ಜ್ವರ ಇಲ್ಲ ಕಣೇ, ಸ್ವಲ್ಪ
ಹೊಟ್ಟೆ ತೊಂದರೆ, ಅಷ್ಟೇ.
ವುಡ್‌ವರ್ಡ್ಸ್ ಗ್ರೈಪ್
ವಾಟರ್ ಕೊಟ್ಟುಬಿಟ್ಟರೆ
ಸಾಕು.

ಮಳೆ ಸುರೀತಾ ಇದೆ
ಯಲ್ಲ, ಡಾಕ್ಟರ್
ವುಡ್‌ವರ್ಡ್ಸ್ ಗ್ರೈಪ
ವಾಟರನ್ನ ಈಗ ನಾನು
ಅವಳಿಗೆ ಕೊಡಬೋದಾ!

ಕೊಡಬೋದಮ್ಮಾ, ಊಂ ಮಳೆ, ಬಿಸಿಲು
ಚಳಿ, ಯಾವಾಗ ಬೇಕಾದ್ರೂ. ಮಕ್ಕಳ
ಆರೋಗ್ಯಕ್ಕಾಗಿ ಇರೋದೇ ಈ
ವುಡ್‌ವರ್ಡ್ಸ್ ಗ್ರೈಪ್ ವಾಟರ್.






100 ವರ್ಷಗಳಿಗೂ ಹೆಚ್ಚು ಕಾಲ
ಮಾತೃಲೋಕದ ವಿಶ್ವಾಸಪಾತ್ರವಾದುದು

# ವುಡ್‌ವರ್ಡ್ಸ್ ಗ್ರೈಪ್ ವಾಟರ್

CAS OPPL 3/80 KN



# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ಪುರಾಣಗಳಲ್ಲಿ ವಿಶೇಷವೆನಿಸಿ, ಅಲ್ಲಲ್ಲಿ ಜ್ಞಾನ ಸೂಕ್ಷ್ಮಗಳನ್ನು ಮಿಂಚಿಸಿಕೊಂಡು, ಹೊಸ ರೀತಿಯ ಪೌರಾಣಿಕ ಕಥಾ ವಿಶೇಷಗಳಿಂದೊಡಗೂಡಿದ 'ದೇವೀ ಭಾಗವತ'ವು ಈ ಸಂಚಿಕೆಯಲ್ಲಿ ಸಂಪೂರ್ಣವಾಯಿತು.

ಮುಂದಿನ ಸಂಚಿಕೆಯಲ್ಲಿ ವಿಕಾರ ರೂಪಿಯಾಗಿ, ವಿನಾಯಕನಾಗಿ, ಆದಿಪೂಜಿತನಾಗಿ, ವಿಘ್ನವಿನಾಶಕನಾಗಿ ಎಲ್ಲರಿಗೂ ಬೇಕಾದವನಾಗಿರುವವನಿಗೆ ಸಂಬಂಧಿಸಿದ ದಿವ್ಯ ಕಥೆಗಳು "ವಿಘ್ನೇಶ್ವರ" ಪ್ರಾರಂಭವಾಗಲಿದೆ.

## ಅಮರವಾಣಿ

**ಸಂತೋಷಾಮೃತ ತೃಪ್ತಾನಾಂ ಯತ್ಸುಖಂ ಶಾಂತ ಚೇತಸಾಮ್**
**ಕುತಸ್ತದ್ಧನ ಲುಬ್ಧಾನಾಂ ಇತಶ್ಚೇತಶ್ಚ ಧಾವತಾಮ್**

ಅಮೃತದಂತಹ ಸಂತೋಷವನ್ನು ಅನುಭವಿಸುತ್ತ ಶಾಂತವಾದ ಮನಸ್ಸಿನವರೇ ಸುಖಿಗಳು. ಇಂತಹ ಸುಖವು ಧನಾಶೆಯುಳ್ಳವರಾಗಿ ನಾನಾ ಬನ್ನಬಡವವರಿಗೆ ಇರಲಾರದು.

---

ಸಂಪುಟ: ೬೬ ಜನವರಿ '೮೧ ಸಂಚಿಕೆ: ೧

**ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦**



# ಪ್ರಶ್ನೋತ್ತರಗಳು

**ಎ. ಪೂರ್ಣಚಂದ್ರ ರಾವ್, ವಿಶಾಖ .**

ಪ್ರ: ಮಾನವನ ಉಷ್ಣೋಗ್ರತೆ ೯೮.೪ ಡಿಗ್ರಿಗಳು. ಬಿಸಿಯಾದ ಬೇಸಗೆ ಕಾಲದಲ್ಲಿ ಮಾನವನ ಉಷ್ಣ ಪರಿಮಾಣ ೯೮.೬ ಅಥವಾ ೯೯ ಡಿಗ್ರಿಗಳಿಗೇರುವಾಗ ಅದು ಸಾಧಾರಣ ಶರೀರ ಉಷ್ಣೋಗ್ರತೆಗೆ ಸಮಾನತಾನೆ? ಅಸಲು ಶರೀರ ತಾಪವು ಏತರಿಂದ ಉಂಟಾಗುತ್ತದೆ? ಜ್ವರವು ೧೦೪ ಡಿಗ್ರಿಗಳಿದ್ದರೆ ಮನುಷ್ಯನು ನಡೆಯಲಾರನು. ಆದರೆ ಬಿಸಿಲು ಕಾಲದಲ್ಲಿ ಹೆಚ್ಚಿನ ಉಷ್ಣೋಗ್ರತೆಯಲ್ಲಿ ಕೂಡಾ ನಡೆಯ ಬಲ್ಲವನಾಗುವುದು ಯಾವುದರಿಂದ ?

ಉ: ವಾತಾವರಣದಲ್ಲಿ ಉಂಟಾಗುವ ಉಷ್ಣೋಗ್ರತೆಯೊಂದಿಗೆ ಸಂಬಂಧವಿಲ್ಲದಂತೆ ಮಾನವನ ಶರೀರವು ತನ್ನ ಉಷ್ಣ ಸ್ಥಿತಿಯನ್ನು ಒಂದೇ ಸ್ಥಾಯಿಯಲ್ಲಿ ಅಂದರೆ ೯೮.೪ ಡಿಗ್ರಿಗಳಲ್ಲಿ ಇಟ್ಟುಕೊಳ್ಳಲಾಗುವಂತೆ ತಕ್ಕ ಏರ್ಪಾಡುಗಳೊಂದಿಗೆ ಕೂಡಿದೆ. ಮುಖ್ಯವಾದ ಸಂಗತಿ ಏನೆಂದರೆ ಶರೀರದಲ್ಲಿ ಅನುಕ್ಷಣವೂ ಉಷ್ಣದ ಉತ್ಪತ್ತಿ ಆಗುತ್ತಾ ಇರುತ್ತದೆ. ಆದರಿಂದ ಶರೀರದ ಉಷ್ಣ ಸ್ಥಿತಿ ಹದ್ದು ಮೀರದೆ ಹೆಚ್ಚಿನ ತಾಪವನ್ನು ಬೆವರಿನ ಮೂಲಕವೂ, ಶ್ವಾಸಗಳ ಮೂಲಕವೂ, ಇತರ ವಿಸರ್ಜನೆಗಳ ಮೂಲಕವಾಗಿಯೂ ಹೊರಗೆ ಬಿಡುತ್ತಾ ಇರುತ್ತದೆ.

ವಾತಾವರಣದ ಉಷ್ಣ ಸ್ಥಿತಿ ಶರೀರಸ್ಥಿತಿಗೆ ಸರಿಯಾಗುವಾಗ, ಶರೀರವು ತಾನು ಅನುಕ್ಷಣವೂ ಉತ್ಪತ್ತಿ ಮಾಡುವ ಹೆಚ್ಚಿನ ಬಿಸಿಯನ್ನು ಗಾಳಿಯಲ್ಲಿ ಬಿಡುವುದು ಸಾಧ್ಯವಾಗದು. ಬೆವರು ಸುರಿಯುವುದಾದರೂ ಅದು ಆವಿಯಾದ ಹೊರತು ಶರೀರವು ತಣ್ಣಗಾಗದು. ಗಾಳಿಯಲ್ಲಿ ಥಂಡಿ ಹೆಚ್ಚಾಗಿದ್ದರೆ ಬೆವರು ಆವಿರಿಯಾಗಲಾರದು. ಅಂತಹ ಸಮಯದಲ್ಲಿ ಪಂಖಾಗಳ ಮೂಲಕ ಬೆವರನ್ನು ಆವಿಯಾಗಿ ಮಾರ್ಪಡಿಸಿ ಶರೀರಕ್ಕೆ ತಂಪನ್ನು ತಂದುಕೊಳ್ಳಬೇಕು. ಅದೇ ವಿಧವಾಗಿ ಚಳಿದೇಶಗಳಲ್ಲಿ ಉಷ್ಣ ಸ್ಥಿತಿ ಮಂಜಿಗಿಂತಲೂ ಬಹಳ ಕಡಿಮೆಗೆ ಇಳಿದು ಹೋಗುತ್ತದೆ. ಆಗ ಶರೀರವು ಅನುಕ್ಷಣವೂ ತಯಾರಿಸುವ ಉಷ್ಣವು ಸಾಲದೆ ಹೋಗಬಹುದು.

ಆಗ ಶರೀರದ ಉಷ್ಣವನ್ನು ಹೆಚ್ಚಿಸಲಿಕ್ಕಾಗಿ ಆಹಾರವನ್ನು ಹೆಚ್ಚು ತಿನ್ನಬೇಕಾಗುತ್ತದೆ. ಆಗ ನಡೆಯುವ ಹೆಚ್ಚಿನ ಜೀರ್ಣ ಕ್ರಿಯೆಯಿಂದ ಶರೀರದಲ್ಲಿ ತಯಾರಾಗುವ ಉಷ್ಣವು ಹೊರಗೆ ಗಾಳಿಯೊಳಗೆ ಹೋಗದಂತೆ ಉಣ್ಣೆಯ ದುಸ್ತುಗಳನ್ನೂ ತೊಗಲಿನ ಸಾಧನಗಳನ್ನೂ ಧರಿಸಬೇಕು. ಉಣ್ಣೆಯ ದುಸ್ತುಗಳು ಉಷ್ಣವನ್ನು ಹೆಚ್ಚಿಸುವುದೆಂದು ಕೆಲವರು ತಪ್ಪಾಗಿ ಊಹಿಸುತ್ತಾರೆ. ನಿಜಸಂಗತಿ ಹಾಗಲ್ಲ, ಅವು ಉಷ್ಣವನ್ನು ನಿರೋಧಿಸುತ್ತವೆ. ಅದಕ್ಕೆ ನಿದರ್ಶನವಾಗಿ ನಾವು ಮಂಜಿನ ಗಡ್ಡೆಯನ್ನು ಉಣ್ಣೆಯ ಬಟ್ಟೆಯ ಮಧ್ಯದಲ್ಲಿ ಸುತ್ತಿಟ್ಟರೆ ಅದು ಕರಗದೆ, ಹೊರಗಿನ ಬಿಸಿಯನ್ನು ಮಂಜಿನ ಗಡ್ಡೆಗೆ ಸೋಕದಂತೆ ಉಣ್ಣೆಯ ಬಟ್ಟೆ ನಿರೋಧಿಸುತ್ತದೆ.

ಹೊರಗಿನ ಉಷ್ಣವು ೧೦೪ ಡಿಗ್ರಿಗಳಿದ್ದರೂ ಶರೀರದ ಉಷ್ಣ ಸ್ಥಿತಿ ೯೮.೪ ಮಾತ್ರವೇ ಇರುತ್ತದೆ. ಜ್ವರ ಬಂದಾಗ ಶರೀರದ ಉಷ್ಣವು ೧೦೪ ಬಂದರೆ, ಹೊರಗೆ ಮಂಜಿನ ಗಡ್ಡೆಯನ್ನಿಟ್ಟರೂ ಮನುಷ್ಯನು ನಡೆಯಲಾರ. ಅವನು ನಡೆಯಲಾಗದೆ ಹೋಗಲು ಕಾರಣ ರೋಗವೇ ಹೊರತು, ಉಷ್ಣ ಪರಿಸ್ಥಿತಿಯಲ್ಲ.




# ರಂಗರಾಜನ ಮದುವೆ

ಅದೊಂದು ಊರಿನಲ್ಲಿ ರಂಗರಾಜನೆಂಬ ತರುಣನಿಗೆ ವಯಸ್ಸು ಇಪ್ಪತ್ತಾಗಿ ಹೋದರೂ, ಯಾವ ಬಾಧ್ಯತೆಯನ್ನೂ ಹಚ್ಚಿಕೊಳ್ಳದೆ ಸುಮ್ಮನೆ ತಿಂದು ಹಾಯಾಗಿ ತಿರುಗಾಡಿ ಕೊಂಡಿದ್ದನು. ತಂದೆ ಅವನಿಗೆ ಯಾವ ಕಾರ್ಯವನ್ನೂ ಒಪ್ಪಿಸದೆ, ಯಾವುದರ ಜವಾಬ್ದಾರಿಯನ್ನೂ ಕೊಡದೆ ಬೆಳೆಯಿಸಿ ಬಿಟ್ಟಿದ್ದನು. ಅದಕ್ಕೆ ಜತೆಯಾಗಿ ವಿದ್ಯೆಯೂ ಅವನಿಗೆ ಸರಿಯಾಗಿ ಹತ್ತಲಿಲ್ಲ. ಕಲಿಯಬೇಕೆಂಬ ಮನಸ್ಸು ಅವನಿಗಿಲ್ಲ. ಸ್ನೇಹಿತರೊಂದಿಗೆ ಹಾಳು ಹರಟೆ ಹೊಡೆಯಲು ಅವನಿಗೆ ಇರುವ ಸಮಯವೂ ಸಾಲದು.

ಅವನು ನೋಡಲಿಕ್ಕೆ ತುಂಬಾ ಚೆಂದಾಗಿರುತ್ತಾನೆ. ತಿಂದುಣ್ಣಲಿಕ್ಕೂ ಹಿರಿಯರ ಆಸ್ತಿ ಸ್ವಲ್ಪ ಇದೆ. ಆದ್ದರಿಂದ ಯಾವ ಹೆಣ್ಣಾದರೂ ಅವನನ್ನು ಮದುವೆಯಾಗಲು ತುಂಬಾ ಇಷ್ಟಪಡುತ್ತಿದ್ದಳು. ಆದರೆ ಹೆತ್ತವರೇ ಹಿರಿಜರಿಯುತ್ತಿದ್ದರು.

ಅವನ ಹಿತ ಚಿಂತಕರು ಕೆಲವರು "ಅಲ್ಲ ರಂಗರಾಜಾ, ನಿನ್ನ ಚೆಂದಕ್ಕೆ ಜೋಡಿಯಾಗಿ ಏನಾದರೊಂದು ಉದ್ಯೋಗವಿದ್ದು ಬಿಟ್ಟರೆ, ಅಪ್ಸರೆಯಂಥ ಹುಡುಗಿ ನಿನಗೆ ಸಿಕ್ಕುತ್ತಾಳೆ" ಎನ್ನುತ್ತಿದ್ದರು.

"ಅದಕ್ಕೇನು ಮಹಾ ? ನನ್ನಪ್ಪ ಸಂಪಾದಿಸಿಟ್ಟದ್ದು ಇನ್ನೊಬ್ಬಳನ್ನು ಸಾಕಲಿಕ್ಕೆ ಸಾಕು ಬಿಡಿ" ಎನ್ನುತ್ತಿದ್ದ ರಂಗರಾಜ. ಕೆಲಸ ಮಾಡಬೇಕೆಂದರೆ ಅವನ ಶರೀರದ ಮೇಲೆ ಹಾವು ಚೇಳುಗಳ ಹರಿದಾಟವೇ !

ಹೀಗಿರುವಾಗ ರಂಗರಾಜನ ಸ್ನೇಹಿತನು ತುಸು ದೂರದ ಒಂದು ಊರಿನಲ್ಲಿ ಒಂದು ಸಂಬಂಧವಿರುವುದಾಗಿ ತಿಳಿದು, ಹೋಗಿ ನೋಡಿ ಬಂದು, ರಂಗರಾಜನೊಂದಿಗೆ ಹೀಗೆಂದನು :

"ಆಹಾ ! ಹುಡುಗಿ ಅಪ್ಸರೆಯೇ ಸರಿ ! ಅದರ ಮೇಲೆ ಭಾರೀ ಆಸ್ತಿಗೆ ಅವಳೇ ವಾರಸಳಾಗುವವಳು. ಆದರೆ ಆ ಹುಡುಗಿಯ ತಾಯಿ ದುರ್ಗಮ್ಮ, ತನ್ನ ಮಗಳಂಥಾ ಸುಂದರಿಯನ್ನು ನನಗೆ ಕೊಡಲು ನನ್ನ ಚೆಂದ ಸಾಲದೆಂದು ನನ್ನ ಮುಖಕ್ಕೇ ಹೇಳಿಬಿಟ್ಟಳು. ನೀನಾದರೂ ನೊಡು. ಆ ಹುಡುಗಿ ನಿನ್ನ ಹೆಂಡತಿಯಾಗಿ ಬಿಟ್ಟರೆ ನಿನಗೆ ಉದ್ಯೋಗವೇ ಬೇಕಾಗಿಲ್ಲ. ಅತ್ತೇ ಮನೆಯ ಅಳಿಯರಾಜನಾಗಿರಬಹುದು !"

ರಂಗರಾಜನಿಗೆ ಈ ಆಲೋಚನೆ ಕೇಳಿ ಬ್ರಹ್ಮಾಂಡದಷ್ಟು ಸಂತೋಷವಾಯಿತು. ತಂದೆಗೆ ಕೂಡಾ

ಎಂ. ಕೆ. ಈಶ್ವರರಾವ್



ಇನ್ನೊಬ್ಬನೇ ? ಆಯಿತು !" ಎಂದಳು ಬೇಸರದಿಂದ. "ನಿಮ್ಮ ಹೆಸರು ? ಊರು ? ಓದು ? ಅಭ್ಯಾಸ ? ಸ್ವಭಾವ ?" ಎಂದು ಮುಂತಾಗಿ ಪ್ರಶ್ನೆಗಳ ಮಳೆಯನ್ನೇ ಸುರಿಸಿ, ಅವನಿಂದ ಉತ್ತರ ಪಡೆದುಕೊಂಡು ರಾಗಿಣಿ ಒಳಗೆ ಹೊರಟು ಹೋದಳು.

ಅವಳ ಸೌಂದರ್ಯವನ್ನೂ, ವೈಯಾರವನ್ನೂ, ನೋಡಿ ರಂಗರಾಜನು ತೀರಾ ಪರವಶನಾದನು. ಅವಳು ಸಿಗದೇ ಹೋದರೆ ತನಗೆ ಹುಚ್ಚು ಹಿಡಿಯಬಹುದೆಂದು ಅವನಿಗೆ ತೋರಿತು.

"ಇನ್ನು ನೀನು ಹೋಗಬಹುದಪ್ಪಾ. ನಮ್ಮ ಉದ್ದೇಶ ಆಮೇಲೆ ಹೇಳುತ್ತೇವೆ " ಎಂದು ದುರ್ಗಮ್ಮ ರಂಗರಾಜನಿಗೆ ಹೇಳಿದಳು.

ಆ ಮನೆಯ ವೈಭವವನ್ನೂ, ರಾಗಿಣಿಯ ಸೌಂದರ್ಯವನ್ನೂ ನೋಡಿದ ಮೇಲೆ ರಂಗರಾಜನಿಗೆ ಅಲ್ಲಿಂದ ಹೊರಡಲು ಕಾಲು ಭಾರವಾಗಿ, ಉಪಾಯವಿಲ್ಲದೆ ಹೊರಟು ಹೋದನು. ತನ್ನ ಅದೃಷ್ಟ ಗೋಡೆಯ ಮೇಲಿನ ಬೆಕ್ಕಾಯಿತಲ್ಲಾ ಎನಿಸಿತು.

ಮುಂದೆ ಒಂದು ವಾರದ ಮೇಲೆ ದುರ್ಗಮ್ಮ ಒಬ್ಬ ಆಳಿನೊಂದಿಗೆ ಸಮಾಚಾರ ಕಳುಹಿಸಿದಳು. "ಹುಡುಗ ನಮಗೆ ಹಿಡಿಸಿದ್ದಾನೆ. ಮುಹೂರ್ತ ವಿಡಿಸಿರಿ " ಎಂಬ ಮಾತು ಕೇಳಿ ರಂಗರಾಜನಿಗೆ ಅಮೃತ ಸೇಚನವಾಯಿತು. ಆನಂದದಿಂದ ಕುಣಿದಾಡಿದನು. ರೊಟ್ಟಿ ಜಾರಿ ತುಪ್ಪದಲ್ಲೇ ಬಿದ್ದಿತ್ತು. ಈ ಸುದ್ದಿ ಕೇಳಿ ಅನೇಕರು ಅಸೂಯೆಪಟ್ಟರು.

"ಶ್ರೀಮಂತ ಸಂಬಂಧ. ಹುಡುಗಿಯ ಆಸ್ತಿಯಷ್ಟೂ ಇನ್ನು ನಿಮ್ಮದೇ. ಬಾಯಿಚಾರಿ ವರದಕ್ಷಿಣೆ ಉಡುಗೊರೆ ಅಂತೆಲ್ಲಾ ಕೆದರಿ ಕೆಡಿಸಿಕೊಳ್ಳಬೇಡಿ!" ಎಂದು ಎಲ್ಲರೂ ರಂಗರಾಜನ ತಂದೆಗೆ ಎಚ್ಚರಿಕೆ ಕೊಟ್ಟರು.

ಒಂದು ತಿಂಗಳು ಮುಗಿಯುವುದರೊಳಗೆ ರಂಗರಾಜನಿಗೆ ರಾಗಿಣಿಯೊಂದಿಗೆ ಮದುವೆಯಾಯಿತು.

ಹೇಳದೆ, ಆ ಹುಡುಗಿಯ ಊರಿಗೆ ಹೋದನು. ಅಲ್ಲಿ ದುರ್ಗಮ್ಮನ ಮನೆ ಕಷ್ಟವಿಲ್ಲದೆಯೇ ಸಿಕ್ಕಿತು. ರಂಗರಾಜನು ಬಾಗಿಲು ತಟ್ಟಿದ ಕೂಡಲೇ ದುರ್ಗಮ್ಮ ಸ್ವತಃ ಬಂದು ಬಾಗಿಲು ತೆರೆದು, "ಯಾರಪ್ಪಾ ನೀನು ? ನಿನ್ನನ್ನು ನೋಡಿದರೆ ನಮ್ಮ ರಾಗಿಣೀನ ನೋಡಲು ಬಂದವನ ಹಾಗೆ ಕಾಣುತ್ತೆ. ಹೌದೇನು ?" ಎಂದು ಕೇಳಿದಳು, ರಂಗರಾಜನನ್ನು ಅಳೆಯುವ ಹಾಗೆ ನೋಡುತ್ತ.

ಅವಳು ಸ್ಥೂಲ ಶರೀರದವಳಾದ ವಿಧವೆ ಹೆಂಗಸು. ಅವಳ ಮಾತು ಕೇಳಿ ರಂಗರಾಜನು, "ಹೌದಲ್ಲ. ಸರಿಯಾಗಿಯೇ ಊಹಿಸಿದಿರಿ" ಎಂದನು.

"ಅಮ್ಮಾ ! ರಾಗಿಣೀ ! ಮತ್ತೊಬ್ಬ ವರ ಬಂದ ನೋಡೇ ! ಬಾರೇ ಹೀಗೆ !" ಎಂದು ಒಳಗೆ ನೋಡಿ ಕೂಗಿದಳು ದುರ್ಗಮ್ಮ.

ರಾಗಿಣಿ ತಾನು ಓದುತ್ತಾ ಇದ್ದ ಪುಸ್ತಕವನ್ನು ಹಿಡಿದುಕೊಂಡೇ ಈಚೆಗೆ ಬರುತ್ತ, "ಮತ್ತೆ

ಹುಡುಗಿಯ ಮನೆಯಲ್ಲಿ ರಂಗರಾಜನ ತಂದೆ ಇತರ ಬಂಧುಗಳೊಂದಿಗೆ ನಾಲ್ಕು ದಿನಗಳಿದ್ದು, ಆಮೇಲೆ ಹೊರಟು ಹೋದನು.

ದುರ್ಗಮ್ಮತ್ತೆ ತನ್ನನ್ನು ಅಲ್ಲಿಯೇ ಇರುವಂತೆ ಹೇಳುವಳೆಂದು ರಂಗರಾಜನು ಬಹಳ ಆಶೆಯಿಂದಿದ್ದನು. ಆದರೆ ದುರ್ಗಮ್ಮ ಹಾಗೇನೂ ಹೇಳದೆ, ಕಡೆಗೆ ಒಂದು ದಿನ, "ಕೇಳಿದೆಯೇನೋ ಅಳಿಯ ರಾಯಾ ? ನಮ್ಮ ಶ್ಯಾನುಭೋಗರ ಎರಡನೇ ಅಳಿಯ ತಿಂಗಳಲ್ಲಿ ಹದಿನೈದು ದಿನ ಅತ್ತೆ ಮನೆಯಲ್ಲೇ ಪ್ರತಿಷ್ಠೆ ಹಾಕಿ ಎಮ್ಮೆ ಹಾಗೆ ತಿಂದುಕೊಂಡಿರುತ್ತಾನಂತೆ. ನಾನಾಗಿರುತ್ತಿದ್ದರೆ ಒದ್ದು ಹೊರಡಿಸಿಬಿಡುತ್ತಿದ್ದೆ" ಎಂದಳು ಯಾವುದೋ ಮಾತಿನ ಸಂದರ್ಭದಲ್ಲಿ.

ಅದನ್ನು ಕೇಳಿ ರಂಗರಾಜನಿಗೆ ತಲೆ ತಿರುಗಿತು. ಈ ಅತ್ತೆಗೆ ತನ್ನನ್ನು ಮನೆಯಲ್ಲಿಟ್ಟುಕೊಳ್ಳುವ ಆಲೋಚನೆ ಸುತರಾಂ ಇಲ್ಲವೆಂದಾಯಿತು.

ಅವನು ಎರಡು ದಿನಗಳ ಮೇಲೆ, ಸ್ವಲ್ಪ ಬುದ್ಧಿವಂತಿಕೆಯಿಂದ, "ಅಲ್ಲತ್ತೇ, ಈ ದೊಡ್ಡ ಪ್ರಾಯದಲ್ಲಿ ನೀವು ಒಬ್ಬರೇ ಇಲ್ಲಿ ಹೇಗೆ ಇರುವಿರಿ? ನಮ್ಮೊಂದಿಗೆ ಬಂದು ಬಿಡಿರೇನು ?" ಎಂದನು.

"ಅದೇನು ಮಾತಪ್ಪಾ? ಯಾರು ಯಾರು ಎಲ್ಲೆಲ್ಲಿ ಇರಬೇಕೋ ಅಲ್ಲಿದ್ದರೇನೇ ಚೆಂದ, ಮರ್ಯಾದೆ. ನನಗೆ ಐವತ್ತು ಇನ್ನೂ ಪೂರ್ತಿಯಾಗಿಲ್ಲ ಗೊತ್ತಾ? ನಾಳೆ ಒಳ್ಳೆಯ ದಿನ. ನೀವಿಬ್ಬರೂ ಹೊರಟುಬಿಡಿ" ಎಂದು ದುರ್ಗಮ್ಮ ಅವರನ್ನು ಕಳುಹಿಸಿಕೊಡುವ ಸನ್ನಾಹಕ್ಕೆ ತೊಡಗಿದಳು.

ಉಪಾಯವಿಲ್ಲದೆ ರಂಗರಾಜನು ರಾಗಿಣಿಯನ್ನು ಕರೆದುಕೊಂಡು ಮನೆಗೆ ಬಂದು ಬಿಟ್ಟನು. ಇಷ್ಟು ದಿನ ಒಬ್ಬನೇ ಆಗಿದ್ದುದರಿಂದ ಯಾವ ಚಿಂತೆಯೂ ಇಲ್ಲದೆ ಬದುಕಿದ್ದನು. ಈಗ ರಾಗಿಣಿ ಅವನ ತಲೆಯ ಮೇಲೆ ಪ್ರೀತಿಯ ಭಾರವಾಗಿ ಕುಳಿತಿದ್ದಳು. ತನ್ನ ಹೆಂಡತಿಯ ಖರ್ಚುಗಳಿಗೆ ಕೂಡಾ ತಂದೆಯ ಹತ್ತಿರ



ಹಣ ಕೇಳಬೇಕಾಗಿ ಬಂದಾಗ ರಂಗರಾಜನಿಗೆ ನಾಚಿಕೆಯಾಗತೊಡಗಿತು. ಯಾವಾಗಲೂ ತನ್ನ ಹತ್ತಿರ ಸ್ವಲ್ಪ ಹಣ ಇರಲೇಬೇಕೆನಿಸಿತು. ಹೇಗಾದರೂ ಮಾಡಿ ಅತ್ತೆಯ ಕೈಯಿಂದ ಸ್ವಲ್ಪ ಹಣ ಬರಮಾಡಿಕೊಳ್ಳಲೇಬೇಕೆಂದು ತೋರಿತು ಅವನಿಗೆ.

"ನಾನು ಏನಾದರೂ ವ್ಯಾಪಾರ ಪ್ರಾರಂಭಿಸಬೇಕೆಂದಿದ್ದೇನೆ. ನಿನ್ನ ಅಮ್ಮನನ್ನು ಕೇಳಿ ಐದು ಸಾವಿರ ರೂಪಾಯಿ ತೆಗೆದುಕೊಂಡು ಬಾ" ಎಂದನು ತನ್ನ ಹೆಂಡತಿಯೊಂದಿಗೆ.

ಅದನ್ನು ಕೇಳಿ ರಾಗಿಣಿ ಹೊಟ್ಟೆ ಹಿಡಿದುಕೊಂಡು ನಕ್ಕು, "ಮರಳು ಹಿಂಡಿದರೆ ಎಣ್ಣೆ ಬರುತ್ತೋ ಏನೋ, ನನ್ನ ಅಮ್ಮನ ಕೈಯಿಂದ ಒಂದು ಚಿಕ್ಕಾಸೂ ಬೀಳದು !" ಎಂದಳು.

ಆದರೂ ಆಶೆ ಬಿಡದೆ ರಂಗರಾಜನು, ಒಬ್ಬರ ಮುಖಾಂತರವಾಗಿ, ವ್ಯಾಪಾರ ಮಾಡಲು ತನಗೆ ಐದು ಸಾವಿರ ಬೇಕೆಂದು ಹೇಳಿ ಕಳುಹಿಸಿದನು.

ಅವನ ಹತ್ತಿರ ದುರ್ಗಮ್ಮ ಹೇಳಿ ಕಳುಹಿಸಿದ ಮಾತು ಇದು : "ಚಿಕ್ಕಾಸು ಇಲ್ಲದವನಿಗೆ ವ್ಯಾಪಾರದ ಗೊಡವೆ ಏಕಂತೆ? ಹಾಳು ಕಸ ಕುಪ್ಪೆಯ ಮೇಲೆ ಮತ್ತಿಷ್ಟು ಹಾಳು ಕಸ ಕುಪ್ಪೆಯೇ ಬೀಳುತ್ತೆ. ಲಕ್ಷ್ಮಿ ಕೂಡಾ ಹಣ ಇರುವವನ ಹತ್ತಿರವೇ ಸೇರುತ್ತಾಳೆ. ಏನಾದರೂ ಉದ್ಯೋಗ ನೋಡಿ ಕೊಳ್ಳಲಿ. ಬಂಗಾರದಂಥ ಮಗಳನ್ನು ಕೊಟ್ಟಿದ್ದೇನೆ. ಇನ್ನೇನೂ ಆಶಿಸಬೇಡ ಅಂತ ಹೇಳು".

ಈ ಮಾತು ಕೇಳಿ ರಂಗರಾಜನ ನರನಾಡಿಗಳೂ ಬತ್ತಿ ಹೋದುವು. ಇನ್ನು ತಾನು ಉದಾಸೀನ ಮಾಡಿ ಲಾಭವಿಲ್ಲ, ಸಂಪಾದಿಸದೇ ಕುಳಿತು ತಿನ್ನುವ ಗಂಡಸು ಹೆಂಡತಿಯ ದೃಷ್ಟಿಯಲ್ಲಿಯೂ ಅಲ್ಪನಾಗಿ ಬಿಡುತ್ತಾನೆ! ಜೀವನದುದ್ದಕ್ಕೂ ಇನ್ನೊಬ್ಬರ ಮೇಲೆ ವಾಲಿಕೊಂಡು ಆತ್ಮಾಭಿಮಾನವಿಲ್ಲದೆ ಬದುಕುವುದು ಬಹಳ ನೀಚತನ!

ಹೀಗೆ ನೆನೆದುಕೊಂಡು ರಂಗರಾಜನು ಒಂದು ತಿಂಗಳವರೆಗೆ ದೀಕ್ಷೆ ಹಿಡಿದು ಪ್ರಯತ್ನಿಸಿ ಒಂದು ಉದ್ಯೋಗವನ್ನು ಸಂಪಾದಿಸಿಕೊಂಡನು. ಈಗ ಅವನ ಜೀವನವು ಹಾಯಾಗಿರುವಂತೆ ಕಾಣತೊಡಗಿತು. ಇದುವರೆಗೆ ಕಳೆದ ಜೀವನವು ಬಹಳ ಕೆಟ್ಟ ಕಾಲವೆನಿಸಿತು. ಆಗ ಎಷ್ಟೋ ಸಾರಿ ಬೇಸರವೆನಿಸಿದ್ದರೂ, ಹಾಳು ಹರಟೆಗಳಿಂದ ಅದನ್ನು ಅಡಗಿಸಿಕೊಳ್ಳುತ್ತಿದ್ದನು. ಈಗ ಆ ಬಗೆಯ ಬೇಸರವಿಲ್ಲ. ಕಾಡು ಹರಟೆಗಳಿಲ್ಲ. ಮುಂದೆ ಒಂದು ವರ್ಷದಲ್ಲಿ ರಂಗರಾಜನು ತಂದೆಯಾದನು.

ಮೊಮ್ಮಗಳನ್ನು ನೋಡಲು ದುರ್ಗಮ್ಮ ಬಂದಳು. ಅವಳು ಮೊಮ್ಮಗಳ ಕೊರಳಿಗೆ ಒಂದು ಚಿನ್ನದ ಹಾರವನ್ನು ಹಾಕಿ, "ಅಳಿಯ ರಂಗರಾಯೋ! ನೀನೀಗ ಗಟ್ಟಿಗನಾದಿ! ನನಗೆ ಬಹಳ ಸಂತೋಷವಾಗಿದೆ. ನೀನು ಸುಂದರ ಪುರುಷ ನಿಜ. ನಿನ್ನ ಕುಟುಂಬದವರ ವಿಷಯವನ್ನೂ ವಿಚಾರಿಸಿದೆ. ಅದೆಲ್ಲಾ ಒಳ್ಳೇದೇ ಅಂತ ಗೊತ್ತಾಯಿತು. ನೀನು ಮಾತ್ರ ಪರಮ ಜಡನೆಂದೂ, ಜವಾಬ್ದಾರಿ ಇಲ್ಲದವನೆಂದೂ ಗೊತ್ತಾಯಿತು. ಭಾರ ತಲೇ ಮೇಲೆ ಬಿದ್ದರೆ ಜವಾಬ್ದಾರಿ ಗೊತ್ತಾಗುತ್ತದೆ ಅಂದುಕೊಂಡು ನಿನಗೆ ಮಗಳನ್ನು ಕೊಟ್ಟೆ. ನಿನ್ನ ಜಡಗುಣವನ್ನು ಓಡಿಸಬೇಕೆಂತಲೇ ಹಣದ ವಿಷಯದಲ್ಲಿ ಅಷ್ಟು ಗಟ್ಟಿ ಮಾಡಿಕೊಂಡೆನು. ಆಸ್ತಿ ಇಟ್ಟುಕೊಂಡು ನಾನೇನು ಕಟ್ಟಿಕೊಂಡು ಹೋಗುತ್ತೇನೆಯೇ! ಅದೆಲ್ಲಾ ನಿನ್ನದೇ!" ಅಂದಳು.

ರಂಗರಾಜನು ಅವಳೊಂದಿಗೆ, "ಅತ್ತೇ, ನನ್ನ ಕುಟುಂಬ ಸುಖವಾಗಿರಲಿಕ್ಕೆ ನನ್ನ ಸಂಪಾದನೆಯೇ ಸಾಕು. ನಿಮಗೆ ಬೇಕೂಂತ ಕಂಡರೆ ಮೊಮ್ಮಗಳಿಗೇ ಕೊಡಿ" ಎಂದ ಆತ್ಮವಿಶ್ವಾಸದಿಂದ.






೮

[ಅರಣ್ಯದಲ್ಲಿ ದಾರಿ ಹುಡುಕುತ್ತಾ ಹೋಗುವ ಸಮರ ಸೇನಾದಿಗಳಿಗೆ ಪ್ರಾಣಾಪಾಯ ಸ್ಥಿತಿಯಲ್ಲಿರುವ ಹೊಸ ಸೈನಿಕನೊಬ್ಬನು ಕಾಣಿಸಿದನು. ಅವನಿಂದ ಕುಂಡಲಿನೀ ದ್ವೀಪದಿಂದ ಬಂದ ಕುಂಭಾಂಡನ ರಾಜದ್ರೋಹದ ವಿಷಯ ಗೊತ್ತಾಯಿತು. ಆ ದ್ರೋಹಿಯ ಅಪಾಯವನ್ನು ಹೇಗೆ ದೂರ ಮಾಡುವುದೆಂದು ಆಲೋಚಿಸುವಾಗ ಅವರ ಮುಂದೆ ಹಠಾತ್ತಾಗಿ ಚತುರ್ನೇತ್ರನು ಪ್ರತ್ಯಕ್ಷನಾದನು.]

ಮಹಾಮಾಂತ್ರಿಕನಾದ ಚತುರ್ನೇತ್ರನು ಇದ್ದಕ್ಕಿದ್ದ ಹಾಗೆ ತಮ್ಮೆದಿರು ಪ್ರತ್ಯಕ್ಷನಾದುದನ್ನು ನೋಡಿ ಸಮರಸೇನನೂ ಸೈನಿಕರೂ ಭಯದಿಂದ ಜುಮುಗುಟ್ಟಿ ನಡುಗಿದರು. ಥಕ್ಕನೆ ಕಾಣುವಂಥ ಈ ಚತುರ್ನೇತ್ರನು ಮನುಷ್ಯನಲ್ಲವೇನೋ ಎಂದು ಸಂದೇಹವೆದ್ದಿತು. ದೇವತೆಯಾದರೆ ಸೌಮ್ಯನಾಗಿರ ಬೇಕಿತ್ತು. ರಾಕ್ಷಸನಾದರೆ ವಿಕೃತಾಕಾರನಾಗಿರುತ್ತಿದ್ದನು. ಮತ್ತಾವ ಅಮಾನುಷ ಜಾತಿಯವನೋ ? ಇಂಥವನನ್ನು ಈ ಈವರೆಗೂ ಕಂಡರಿಯದ ಹೊಸ ಸೈನಿಕನಂತೂ ಇಂದಿಗೆ ತಮ್ಮೆಲ್ಲರ ಕಥೆ ಮುಗಿದೇ ಹೋಯಿತೆಂಬಂತೆ ನಡುಗುತ್ತಿದ್ದನು. ಅದಕ್ಕೆ ಸರಿಯಾಗಿ ಚತುರ್ನೇತ್ರನ ತೀಕ್ಷ್ಣ ದೃಷ್ಟಿ ಆಗಾಗ ಅವನ ಮೇಲೆ ಹಾರುತ್ತಿತ್ತು. ಆ ಚತುರ್ನೇತ್ರನ ಗೂಢಚಾರರಂತಹ ಕರಿಗೂಗೆಯೂ ನರವಾನರವೂ ಅಲ್ಲಿಯೇ ಅಕ್ಕ ಪಕ್ಕಗಳಲ್ಲಿವೆ. ಕಡೆಗೆ ತನ್ನನ್ನು ಕಂಡು ಹೆದರುವವರನ್ನು ನೋಡಿ ಚತುರ್ನೇತ್ರನು ನಗುತ್ತ, "ನನ್ನನ್ನು ನೋಡಿ ನೀವಾರೂ ಭಯಪಡಬೇಕಾಗಿಲ್ಲ. ಪರರಿಗೆ ವೃಥಾ ಕೆಡುಕು ಮಾಡುವುದು ನನ್ನ ಜಾಯಮಾನವಲ್ಲ. ನೀವಂತೂ ಹೊರಗಿನಿಂದ ಬಂದ ಹೊಸಬರು. ಇಲ್ಲಿನ ಯಾವ ಸಂಗತಿಯನ್ನೂ ತಿಳಿಯದವರು.




ನಿಮ್ಮ ಮೇಲೆ ನನಗೆ ಯಾವ ಶತ್ರುತ್ವವೂ ಇಲ್ಲ. ಅಸಲು ಈ ಲೋಕದಲ್ಲಿ ನನಗೆ ಆ ಏಕಾಕ್ಷಿಯೊಬ್ಬನ ಹೊರತು ಬೇರೆ ಯಾರೂ ಶತ್ರುಗಳಲ್ಲ. ಅವನಾದರೂ ನನ್ನನ್ನು ನಾಶಪಡಿಸಲು ನೋಡುವುದರಿಂದಲೇ ಅವನನ್ನು ನಾನು ಶತ್ರುವಾಗಿ ಭಾವಿಸಬೇಕಾಯಿತು" ಎಂದು ಹೇಳಿ, ಹೊಸ ಸೈನಿಕನನ್ನು ನೋಡಿ "ಈ ಹೊಸಬನು ಯಾರು? ನಿಮ್ಮ ಬಳಗದವನಂತೆ ಕಾಣುವನಲ್ಲಾ? ಅವನಿಗೇನಾಯಿತು?" ಎಂದು ಕೇಳಿದನು.

ಅಭಯ ವಾಣಿಯಿಂದ ಧೈರ್ಯಗೊಂಡ ಆ ಹೊಸಬನೇ ಉತ್ತರಕೊಟ್ಟ: "ನನ್ನ ಹೆಸರು ಧನಪಾಲ. ನಾನು ಇವರ ದೇಶದಿಂದಲೇ ಇವರಿಗೆ ತಿಳಿಯದೆ ಬಂದವನು. ಇಲ್ಲಿ ಪ್ರಾಣಾಪಾಯದಲ್ಲಿ ಸಿಕ್ಕಿಕೊಂಡಿದ್ದ ನನ್ನನ್ನು ಆಕಸ್ಮಿಕವಾಗಿ ಇವರು ಬಂದು ಕಾಪಾಡಿದರು."

ಅದನ್ನು ಕೇಳಿ ಚತುರ್ನೇತ್ರನು ತಲೆಯನ್ನು ಅಡ್ಡವಾಗಿ ಆಡಿಸುತ್ತ, "ನಿಮಗೆಲ್ಲಾ ದೊಡ್ಡ ಆಪತ್ತು ಇನ್ನು ಮೇಲಿದೆ. ಅದೀಗ ಬೇಗನೇ ಬರಲಿದೆ. ಇಷ್ಟರ ವರೆಗೆ ನಿಮಗೆ ಕೇಡು ಮಾಡುವವನೊಬ್ಬನಿದ್ದರೆ ಅದು ಆ ಏಕಾಕ್ಷಿ ಮಾಂತ್ರಿಕನೊಬ್ಬನೇ! ಈಗ ಈ ದ್ವೀಪದ ದಕ್ಷಿಣ ಭಾಗದ ಗುಡ್ಡದಾಚೆಯಿಂದ ನಿಮ್ಮಂತಹ ಮನುಷ್ಯರಿಂದಲೇ ನಿಮ್ಮೆಲ್ಲರ ಪ್ರಾಣಕ್ಕೂ ಸಂಚಕಾರ ಬರಲಿದೆಯೆಂಬ ಸಂಗತಿ ನಿಮಗಿನ್ನೂ ಗೊತ್ತಾಗಿಲ್ಲವೆಂದು ಕಾಣುತ್ತದೆ!" ಎಂದನು.

ಅವನು ಹೀಗೆ ಹೇಳಿ ಮುಗಿಸಲು, ಆ ಅಪಾಯವು ಕುಂಭಾಂಡನ ಕಡೆಯದೇ ಇರಬೇಕೆಂದು ಸಮರಸೇನನಿಗೆ ಅರ್ಥವಾಯಿತು.

ಆಗ ಸಮೀಪದಲ್ಲಿದ್ದ ಪೊದೆಗಳ ಮರೆಯಲ್ಲಿ ಇಬ್ಬರು ಆಟವಿಕರು ಅಡಗಿಕೊಂಡು ಅವರನ್ನೇ ಲಕ್ಷ್ಯವಿಟ್ಟು ನೋಡುವ ಸಂಗತಿ ಸಮರಸೇನನಿಗೆ ತಿಳಿಯಲಿಲ್ಲ. ಅವನು ಚತುರ್ನೇತ್ರನ ಕಡೆಗೆ ಎರಡಡಿ ಮುಂದಿಟ್ಟು, "ಮಹಾಮಹಿಮರಾದ ಚತುರ್ನೇತ್ರರೇ! ನೀವು ಒಳ್ಳೆಯ ಗುಣವುಳ್ಳ ಮಾಂತ್ರಿಕರಂತೆ ಕಾಣುವಿರಿ. ನೀವು ಹೇಳಿದ ಹಾಗೆ ನಿಜಕ್ಕೂ ನಮಗೆ ಪ್ರಾಣಾಪಾಯ ಬರುವ ಹಾಗೆ ಕಾಣುವುದಾದರೆ, ಅದರ ನಿವಾರಣೆಯ ಮಾರ್ಗವೂ ನಿಮಗೆ ತಿಳಿದಿರಬಹುದು. ಅದನ್ನು ದಯವಿಟ್ಟು ನಮಗೆ ತಿಳಿಸುವಿರಾ?" ಎಂದು ಕೇಳಿಕೊಂಡನು.

ಚತುರ್ನೇತ್ರನು ಕೂಡಲೇ ಉತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತು ಆಲೋಚಿಸುತ್ತಾ ಸುಮ್ಮನಿದ್ದು, "ಸಮರಸೇನಾ, ಈ ದ್ವೀಪದಲ್ಲಿ ಇಷ್ಟೊಂದು ರಗಳೆಗಳಿಗೆಲ್ಲಾ ಮೂಲಕಾರಣ ಸಮುದ್ರದ ಪಶ್ಚಿಮ ತೀರದಲ್ಲಿ ಅರ್ಧ ಮುಳುಗಿಕೊಂಡಿದ್ದ ಒಂದು ನೌಕೆಯೇ, ಆ ನೌಕೆಯ ತುಂಬಾ ಧನರಾಶಿಗಳಿವೆಯೆಂದು ಎಲ್ಲರಿಗೂ ಗೊತ್ತಾಗಿದೆ. ಧನದಿಂದ ಆಗದಂಥ ಕೆಲಸ ಯಾವುದೂ ಇಲ್ಲವೆಂದು ಎಲ್ಲರೂ ಅಂದುಕೊಂಡಿದ್ದಾರೆ. ಏಕಾಕ್ಷೀ ಮಾಂತ್ರಿಕನಿಗೆ ಧನವು ಬೇಕು. ನನಗೂ ಆ ನೌಕೆಯನ್ನು ಕಾವಲು

ಕಾಯುತ್ತಿರುವ ನಾಗಕನ್ಯೆಯ ಮೇಲೆ ಕಣ್ಣಿದೆ. ನನಗೆ ಅವಳು ಬೇಕು. ಇನ್ನು ನಿಮಗೆ ಏನು ಬೇಕೋ ಅದನ್ನಿಷ್ಟು ಹೇಳು. ಆಗ ನನ್ನ ಕೈಲಾದ ಸಹಾಯ ಮಾಡಲು ನೋಡುತ್ತೇನೆ" ಎಂದನು.

ಸಮರಸೇನನು ಅದಕ್ಕೇನೋ ಉತ್ತರ ಕೊಡಲು ನೋಡುವಾಗ, ಹೊಸ ಸೈನಿಕ ಧನಪಾಲನು ಅಕಸ್ಮಾತ್ತಾಗಿ ಎಲ್ಲರೂ ಗಾಬರಿ ಬೀಳುವಂತೆ ಕೆಟ್ಟದನಿಯಿಂದ ಕಿರಿಚಿದನು. ಸಮರಸೇನನೂ ಸೈನಿಕರೂ ಅವನ ಕಡೆಗೆ ತಲೆ ತಿರುಗಿಸಿ, "ಏನಾಯಿತು ?" ಎಂದರು.

ಧನಪಾಲನು ಸ್ವಲ್ಪ ದೂರದಲ್ಲಿರುವ ಪೊದೆಗಳ ಕಡೆಗೆ ನೋಡಿ ಕೈಯಾಡಿಸುತ್ತ, "ಅಲ್ಲಿ ನೋಡಿ! ಆ ಕಾಡಾಡಿಗಳು ಇಲ್ಲಿಗೇ ಬಂದಿದ್ದಾರೆ. ನನ್ನನ್ನು ಮರಕ್ಕೆ ಕಟ್ಟಿ ನೇತುಹಾಕಿದವರು ಇವರೇ! ಇವರೇ!" ಎಂದನು.

ಪೊದೆಗಳ ಮರೆಯಲ್ಲಿ ಅಡಗಿದ್ದ ಆಟವಿಕರು ಸಮರಸೇನನಿಗೂ ಸೈನಿಕರಿಗೂ ಈಗ ಕಾಣಿಸಿದರು. ಸಮರಸೇನನು ಕೂಡಲೇ ಬಿಲ್ಲಿಗೆ ಬಾಣ ಸಂಧಿಸಿದನು.

ಚತುರ್ನೇತ್ರನು ಅವನನ್ನು ತಡೆದು, "ಸಮರ ಸೇನಾ! ನಿನ್ನ ಬಾಣದ ಗುರಿಗೆ ಅವರು ಸಿಕ್ಕಲಾರರು. ಆಕಾಶದಲ್ಲಿ ಹಾರುವ ಗರುಡಪಕ್ಷಿಯನ್ನೂ, ಓಡುವ ಚಿರತೆಯನ್ನೂ ನೀನು ಬಾಣ ಹೊಡೆದು ಕೆಡವಿರ ಬಹುದು. ಆದರೆ ಇವರು ಮಾತ್ರ ನಿನ್ನ ಬಾಣದ ವೇಗವನ್ನೇ ಮಿಂಚಿ ಓಡುವಂಥವರು. ಇವರ ಸಮಾಚಾರ ನಾನು ನೋಡಿಕೊಳ್ಳುತ್ತೇನೆ" ಎಂದು ಹೇಳಿ, "ನರವಾನರಾ! ಉಲೂಕಾ!" ಎಂದು ಕೂಗಿದನು. ಮರುಕ್ಷಣದಲ್ಲಿ ಕರಿಗೂಗೆಯೂ, ನರ ವಾನರವೂ ಅವನ ಹತ್ತಿರ ಬಂದುವು.

"ನರವಾನರಾ! ಅಲ್ಲಿ ಹೊಂಚುಹಾಕಿ ಓಡುವವ ರನ್ನು ನೀನು ಹತಮಾಡು, ಉಲೂಕಾ, ಚೆನ್ನಾಗಿ ಹುಡುಕಿ ನೋಡು! ಸಿಕ್ಕಿದವನನ್ನು ಕುಕ್ಕು! ಕೊಲ್ಲು!






ತಪ್ಪಿ ಹೋಗಲು ಬಿಡಬೇಡ!" ಎಂದು ಅಪ್ಪಣೆ ಕೊಟ್ಟನು ಚತುರ್ನೇತ್ರ.

ಆ ಕೂಡಲೇ ನರವಾನರವು ದೊಡ್ಡ ದೊಡ್ಡ ಕುಪ್ಪಳಿಕೆಯೊಂದಿಗೆ ಮುಂದಕ್ಕೆ ಧುಮುಕಿಕೊಂಡು ಹೋಗಿ, ಆಟವಿಕರಲ್ಲೊಬ್ಬನನ್ನು ತನ್ನ ಬಲವಾದ ಕೈಗಳನ್ನು ಚಾಚಿ ಬಳಸಿ ಹಿಡಿದುಕೊಂಡಿತು. ಅವನು ಪ್ರಾಣಭೀತಿಯಿಂದ ಅರಣ್ಯವು ಮಾರ್ಮೊಳಗುವಂತೆ ಅರಚ ತೊಡಗಿದನು. ನರವಾನರವು ಅವನನ್ನು ಲೀಲಾಜಾಲವಾಗಿ ಮೂರು ನಾಲ್ಕು ಸುತ್ತು ಬೀಸಿ ಮೇಲಕ್ಕೆ ಹಾರಿಸಿಬಿಟ್ಟಿತು. ಅವನು ಹೋ ಎಂದು ಕೂಗುತ್ತಾ, ದೂರದಲ್ಲಿದ್ದೊಂದು ಬಂಡೆಯ ಮೇಲೆ ಹೋಗಿಬಿದ್ದನು.

ಕರಿಗೂಗೆ ಓಡಿ ಹೋಗುವ ಎರಡನೇ ಕಾಡು ಮನುಷ್ಯನ ಮೇಲೆ ರೆಕ್ಕೆಯಾಡಿಸುತ್ತಾ ಹಾರಿತು. ಅದು ತನ್ನ ಮೊನಚಾದ ಉಗುರುಗಳಿಂದ ಅವನ ತಲೆಯ ಮೇಲೆ ಹೊಡೆದು ಪರಚುತ್ತ, ಕರ್ಕಶವಾಗಿ ಕೂಗ ತೊಡಗಿತು. ಮತ್ತೆ ಸ್ವಲ್ಪ ಹೊತ್ತಿನೊಳಗೆ ಅವನು ಮೊದಲಿನವನ ಗತಿಗೆ ಮುಟ್ಟಿದನು.

ಅದನ್ನು ನೋಡಿ ಧೈರ್ಯಗೊಂಡ ಸೈನಿಕ ಧನಪಾಲನು ಸುತ್ತಲೂ ನೋಡುತ್ತ, "ಅಯ್ಯಬ್ಬಾ! ಎರಡನೇ ಸಾರಿ ಬದುಕಿದೆ! ನಾಲಗೆ ದಾಹದಿಂದ ಅಂಟಿ ಹೋಗಿದೆ. ಇಲ್ಲೆಲ್ಲಿಯಾದರೂ ನೀರು ಸಿಗುತ್ತದೆಯೇ?" ಎಂದು ಪಕ್ಕದಲ್ಲಿದ್ದ ಸೈನಿಕನನ್ನು ಕೇಳಿದನು.

ಅದನ್ನು ಕೇಳಿ ಚತುರ್ನೇತ್ರನು, "ಎಷ್ಟೇ ದಾಹವಾಗಿದ್ದರೂ ಕಣ್ಣಿಗೆ ಬಿದ್ದ ನೀರಿನ ಬಳಿಗೆಲ್ಲಾ ಹೋಗಿಬಿಡಬೇಡಿ! ತುಂಬಾ ಜಾಗ್ರತೆ ಬೇಕು. ಈ ದ್ವೀಪವು ಎಲ್ಲಾ ವಿಧದಲ್ಲಿಯೂ ಭಯಂಕರವಾದುದು. ನನ್ನೊಂದಿಗೆ ಬನ್ನಿ. ನಿಮಗೆ ನೀರು ಕುಡಿಯಲು ತಕ್ಕುದಾದ ಕೊಳವನ್ನು ತೋರಿಸುತ್ತೇನೆ." ಎಂದು ಹೇಳಿ ತಾನು ಮುಂದಾಗಿ ದಾರಿ ತೆಗೆದನು.

ನೀರು ಸಿಗುವುದೆಂದು ತಿಳಿದು ಎಲ್ಲ ಸೈನಿಕರಿಗೂ ದಾಹವೆನಿಸ ತೊಡಗಿತು. ಎಲ್ಲರೂ ಒಂದಾನೊಂದು ಕೊಳದ ಬದಿಗೆ ಹೋದರು. ಅದರಲ್ಲಿ ಮೊಸಳೆಗಳೂ, ಬೇರೆ ಎಂತಹುದೋ ಕ್ರೂರ ಪ್ರಾಣಿಗಳೂ ಈಜಾಡಿಕೊಂಡಿದ್ದುವು. ಸೈನಿಕರು ಅಂತಹ ಪ್ರಾಣಿಗಳಿಲ್ಲದ ಭಾಗಕ್ಕೆ ಹೋಗಿ, ಕಾಲುಗಳನ್ನು ನೀರಿಗಿಳಿಸದೆ ಬೇಕಾದಷ್ಟು ನೀರು ಕುಡಿದರು. ಎಲ್ಲರಿಗೂ ಹೊಸ ಬಲವೂ ಚೇತನವೂ ಬಂದಿತು.

ಚತುರ್ನೇತ್ರನು ಕೊಳದ ಬದಿಯ ಮರದ ಕೆಳಗೆ ನಿಂತುಕೊಂಡು ಸಮರಸೇನನೊಂದಿಗೆ ಏನೋ ಹೊಸ ವಿಷಯವನ್ನು ಕುರಿತು ಮಾತಾಡುತ್ತಿದ್ದನು. ಅವನು ಹೇಳಿದ ಸಂಗತಿಗಳಿಂದ, ದಕ್ಷಿಣ ಪ್ರಾಂತದಿಂದ ಬರುವ ಅಪಾಯವು ಕುಂಭಾಂಡ, ಹಾಗೂ ಅವನ ಸಹಚರರಾಗಿ ಮಾರ್ಪಟ್ಟ ಕಾಡು ಮನುಷ್ಯರಿಂದಲೇ ಇರಬಹುದು ಎಂಬ ಸಂದೇಹ ಸಮರಸೇನನಲ್ಲಿ ಇನ್ನಷ್ಟು ಬಲವಾಯಿತು.



ಅದೊಂದು ಬದಿಯಲ್ಲಿದ್ದರೆ, ಚತುರ್ನೇತ್ರನು ಹೇಳಿದ ನಾಗಕನ್ಯೆಯ ವಿಷಯದಲ್ಲಿದ್ದ ಅನುಮಾನ ಕೂಡಾ ತೀರಲಿಲ್ಲ. ಅವನು ಚತುರ್ನೇತ್ರನೊಂದಿಗೆ "ಅಯ್ಯಾ, ಚತುರ್ನೇತ್ರರೇ! ನನ್ನನ್ನು ಅಪಾರ್ಥ ಮಾಡಿಕೊಳ್ಳಬಾರದು. ಧನರಾಶಿಯ ನಾವೆಯನ್ನು ನಾಗಕನ್ಯೆಯೊಬ್ಬಳು ಕಾಪಾಡುವ ಮಾತು ನಿಜ ವೇನು?" ಎಂದು ಕೇಳಿದನು.

"ಅದರಲ್ಲಿ ಸ್ವಲ್ಪವೂ ಸುಳ್ಳಿಲ್ಲ. ಬೇಕಾದರೆ ನನ್ನ ಹಿಂದೆ ಬನ್ನಿ. ನಿಮಗೆ ಆ ನೌಕೆಯನ್ನೂ, ಅದನ್ನು ಕಾವಲು ಕಾದು ಕಾಪಾಡುವ ನಾಗಕನ್ಯೆಯನ್ನೂ ತೋರಿಸುತ್ತೇನೆ. ಆ ಪ್ರದೇಶಕ್ಕೆ ಹೆಚ್ಚು ನಡೆಯ ಬೇಕಾಗಿಲ್ಲ. ಇಲ್ಲಿಗೆ ಬಹಳ ಸಮೀಪವೇ" ಎಂದನು ಚತುರ್ನೇತ್ರ ಮಾಂತ್ರಿಕ.

ಹಾಗಾದರೆ ಹೋಗೋಣವೆಂದು ಸಮರಸೇನಾದಿಗಳು ಹೊರಟರು. ಚತುರ್ನೇತ್ರನು ಮುಂದಿನಿಂದ ಮಾರ್ಗದರ್ಶಕನಾಗಿ ನಡೆದನು. ಸ್ವಲ್ಪ ಹೊತ್ತಿಗೆಲ್ಲಾ ಅವರು ಒಂದು ಎತ್ತರವಾದ ಗುಡ್ಡದ ಪ್ರಾಂತವನ್ನು ತಲಪಿದರು. ಅಲ್ಲಿಂದ ನಿಂತು ನೋಡಿದರೆ ಪ್ರಶಾಂತವಾಗಿರುವ ಸಮುದ್ರವು ಕಾಣುತ್ತಿತ್ತು.

"ಅದೋ ಆ ದಿಕ್ಕನ್ನು ನೋಡು, ನೌಕೆಯೊಂದು ಕಾಣುತ್ತದೆಯೇ?" ಎಂದು ಚತುರ್ನೇತ್ರನು, ತನ್ನ ಉದ್ದವಾದ ಕೈಯ ತೋರು ಬೆರಳನ್ನು ಸಮುದ್ರದ ಕಡೆಗೆ ನೀಡಿ ತೋರಿಸಿದನು.

ಸಮರಸೇನನೂ ಸೈನಿಕರೂ ಆ ಕಡೆಗೆ ಲಕ್ಷ್ಯ ಗೊಟ್ಟು ನೋಡಿದರು. ಅಲ್ಲೊಂದು ನಾವೆಯಿರುವುದು ಸ್ಪಷ್ಟವಾಗಿ ಕಂಡು ಬಂತು. ಅದು ಅರ್ಧ ಭಾಗದಷ್ಟು ಸಮುದ್ರದಲ್ಲಿ ಮುಳುಗಿತ್ತು. ಹರಿದು ಹೋದ ಅದರ ತೆರೆ ಚಾಪೆಗಳು ಗಾಳಿಯಲ್ಲಿ ಹಾರಾಡುತ್ತಿದ್ದುವು. ಅಲೆಗಳ ಕುಣಿಕೆಯಲ್ಲಿ ನಾವೆಯೂ ಓಲಾಡುತ್ತಿದ್ದಿತು. ಆರೆ ಅದರಲ್ಲಿರುವ ಧನರಾಶಿಯನ್ನು ಕಾಯುತ್ತಿರುವ ನಾಗಕನ್ಯೆ ಮಾತ್ರ ಎಲ್ಲಿರುವಳೆಂದು ಅವರಿಗೆ ಗೊತ್ತಾಗಲಿಲ್ಲ. ನಾಗಕನ್ಯೆಯಾದುದರಿಂದ ಸಮುದ್ರದಲ್ಲೇ ಇರುವಳೇನೋ?

"ನಾಗಕನ್ಯೆ ಕಾಣುವುದಿಲ್ಲವಲ್ಲಾ?" ಎಂದು ಸಮರಸೇನನು ಕಣ್ಣು ಕುತ್ತಿ ನೋಡುತ್ತ ಪ್ರಶ್ನೆ ಮಾಡಿದನು.

ಅವನ ಪ್ರಶ್ನೆ ಕೇಳಿ ಚತುರ್ನೇತ್ರನು ಸಣ್ಣಗೆ ನಕ್ಕು "ಆ ನಾಗಕನ್ಯೆ ಕೂಡಾ ನಿನ್ನ ಕಣ್ಣಿಗೆ ಗೋಚರಿಸಿಬಿಟ್ಟರೆ ಮತ್ತೆ ನನ್ನ ಮಂತ್ರ ತಂತ್ರಗಳು ಹುಲ್ಲಿಗೆ ಸಮ ಅನ್ನಬೇಕು. ನಾಗಕನ್ಯೆಯನ್ನು ನಾನೂ, ಏಕಾಕ್ಷಿ ಮಾಂತ್ರಿಕನೂ ಮಾತ್ರ ನೋಡಲು ಸಾಧ್ಯ. ಏಕಾಕ್ಷಿ ಧನದ ಮೇಲಿನ ಆಸೆಯಿಂದ ಅವಳ ಮೇಲೆ ಹಗೆ ತೊಟ್ಟಿದ್ದಾನೆ. ನಾನೇನೋ ನಾಗಕನ್ಯೆಯನ್ನು ವರಿಸಿಕೊಂಡಿದ್ದೇನೆ. ನೀನು ಆಮೇಲೆ ಅವಳನ್ನು ನೋಡುವೆಯಂತೆ!" ಎಂದನು.

ಸಮರಸೇನನು ಏನೂ ಹೇಳದೆ ಅರ್ಧಬಾಯಿ ತೆರೆದು ಹಾಗೇ ನೋಡುತ್ತ ನಿಂತನು. ಚತುರ್ನೇತ್ರನೊಂದಿಗೆ ಏನು ಹೇಳಬೇಕೆಂದು ಅವನಿಗೆ ಗೊತ್ತಾಗ

ಲಿಲ್ಲ. ಮೊತ್ತ ಮೊದಲು ನೌಕೆಯಲ್ಲಿರುವ ಧನ ರಾಶಿಯ ಸಂಗತಿಯನ್ನು ತಿಳಿದಾಗ, ಅದನ್ನು ವಶ ಪಡಿಸಿಕೊಂಡು ಕುಂಡಲಿನೀ ದ್ವೀಪಕ್ಕೆ ತಲುಪಿಸ ಬೇಕೆಂದು ಅಂದುಕೊಂಡಿದ್ದನು. ಆದರೆ ಆ ಕೆಲಸ ಈಗ ಸಾಧ್ಯವಾಗುವಂತಿಲ್ಲವೆಂದು ಕಾಣುತ್ತಿತ್ತು. ಇದರಲ್ಲಿ ಈಗ ಮತ್ತೊಂದು ಅಡ್ಡಗೋಡೆಯು ಹಾಗೆ ರಾಜದ್ರೋಹಿ ಕುಂಭಾಂಡನು ಕೂಡ ಆ ಧನಕ್ಕಾಗಿಯೇ ಪ್ರಯತ್ನಿಸದೆ ಬಿಡಲಾರನು. ಆ ಧನಕ್ಕೆ ಏಕಾಕ್ಷಿ ಮಾಂತ್ರಿಕನ ದೊಡ್ಡ ವಿಘ್ನ ಇದ್ದೇ ಇದೆ. ಇತಂಹ ಮುಕ್ಕಟ್ಟಿನಲ್ಲಿರುವ ಆ ಧನವನ್ನು ನಾಗಕನ್ಯೆಯ ಕಾವಲನ್ನು ತಪ್ಪಿಸಿ ವಶಪಡಿಸಿಕೊಳ್ಳುವುದು ತನ್ನಿಂದ ಆದೀತೆ? ತನಗೆ ದೊಡ್ಡದೊಂದು ಮಹಾ ಮಂತ್ರ ಶಕ್ತಿಯ ಸಹಾಯವಿದ್ದಿದ್ದರೆ ಎಷ್ಟು ಒಳ್ಳೆಯದಿತ್ತು!

ಸಮರಸೇನನ ಆಲೋಚನೆಯ ಕ್ರಮವನ್ನು ಗ್ರಹಿಸಿಕೊಂಡವನಂತೆ ಚತುರ್ನೇತ್ರನು ಗಟ್ಟಿಯಾಗಿ ನಕ್ಕು, "ಸಮರಸೇನಾ! ನಿನ್ನ ಮನಸ್ಸಿನಲ್ಲಿ ನಡೆಯುವ ತರ್ಕ ವಿತರ್ಕಗಳು ನನಗೆ ಗೊತ್ತಾಗುತ್ತವೆ. ನಿನಗೆ ಬೇಕಾದ ಆ ಧನದ ವಿಷಯದಲ್ಲಿ ಮಾತ್ರ ನಾನು ನಿನ್ನ ಸ್ಪರ್ಧೆಗಾರನಲ್ಲವೆಂದು ತಿಳಿ. ಇದರಲ್ಲಿ ನಿನ್ನೊಂದಿಗೆ ಸ್ಪರ್ಧಿಸುವವನು ಆ ಏಕಾಕ್ಷಿ ಮಾಂತ್ರಿಕನೊಬ್ಬನೇ, ಆದುದರಿಂದ ನಾವಿಬ್ಬರೂ ಒಂದಾಗಿ ಬಿಟ್ಟರೆ ಏನಾದರೂ ಕಾರ್ಯ ಸಾಧನೆ ಮಾಡಿಕೊಳ್ಳಬಹುದೇ ಅಂತ ಆಲೋಚಿಸುತ್ತಿದ್ದೇನೆ. ಇದು ನಿನಗೂ ಸಂತೃಪ್ತಿ ತಾನೇ?" ಎಂದನು.

ಚತುರ್ನೇತ್ರನು ಹೀಗೆ ಮಾತಾಡಿದುದನ್ನು ಕೇಳುವಾಗ ಸಮರಸೇನನ ಮನಸ್ಸಿಗೆ ಅಮೃತ ಸೇಚನ ಮಾಡಿದಂತಾಯಿತು. ತುಂಬಾ ಉತ್ಸಾಹವೆದ್ದಿತು. ಈ ಭಯಂಕರ ದ್ವೀಪದಿಂದ ಪ್ರಾಣದೊಂದಿಗೆ ಹೇಗೆ ಹೊರಬೀಳುವುದೋ ಎಂದು ಆಲೋಚಿಸಿಕೊಂಡಿದ್ದವನಿಗೆ ಒಂದು ಹೊಸ ಆಶೆ ಉದಿಸಿತು. ಅದೇನೆಂದರೆ ಮಹಾವೀರನಾದ ರಾಜದ್ರೋಹಿ ಕುಂಭಾಂಡನನ್ನು



ನಾಶಪಡಿಸಿಬಿಡಬೇಕು. ಆ ನೌಕೆಯ ಧನವನ್ನೆಲ್ಲಾ ವಶಪಡಿಸಿಕೊಳ್ಳಬೇಕು. ಆ ನಾವೆ ಸಾಧಾರಣ ನಾವೆಯಂತೂ ಅಲ್ಲ. ಅದರ ರಹಸ್ಯ ಏನೋ ಬೇರೆಯೇ ಇರಬೇಕು. ಅದರ ರಹಸ್ಯದಲ್ಲಿ ಏನೇನು ಅಡಗಿದೆಯೋ!

ಈ ಆಲೋಚನೆಯಿಂದ ಎಲ್ಲದಕ್ಕೂ ಮೊದಲು ಆ ನಾವೆಯು ಹಿಂದಿರುವ ರಹಸ್ಯ ವಿಷಯಗಳನ್ನು ತಿಳಿದುಕೊಳ್ಳುವ ಕುತೂಹಲದ ಒತ್ತಡ ಹೆಚ್ಚಾಯಿತು. ಅವನು ಚತುರ್ನೇತ್ರನನ್ನು ನೋಡಿ, "ಚತುರ್ನೇತ್ರಾ! ನಾವೀಗ ಸ್ನೇಹಿತರಾದೆವೆಂಬ ಸಲಿಗೆಯಲ್ಲಿ ಮಾತಾಡುತ್ತೇನೆ. ಸಾಧಾರಣವಾಗಿ ಮಾಂತ್ರಿಕರೆಂದರೆ ಯಾವ ಮನುಷ್ಯನಾದರೂ ಭಯಪಡುವನು. ಆದರೆ ಈ ದ್ವೀಪದಲ್ಲಿರುವ ನಿನಗೂ ಏಕಾಕ್ಷಿ ಮಾಂತ್ರಿಕನಿಗೂ ನಡುವೆ ಎಷ್ಟೋ ವ್ಯತ್ಯಾಸವಿದೆ. ನಿನ್ನಲ್ಲಿ ಭೂತದಯುವೂ ಮಿತ್ರವಾತ್ಸಲ್ಯವೂ ಒಸರುವುದನು ನೋಡುತ್ತೇನೆ. ನಿನಗೆ ನನ್ನಿಂದ ಯಾವ ಸಹಾಯ

ಬೇಕಾದರೂ ನನ್ನ ಶಕ್ತಿಯ ಮಟ್ಟಕ್ಕೆ ವಂಚನೆ ಇಲ್ಲದೆ ಮಾಡುತ್ತೇನೆ. ಈಗ ಮೊದಲು ಆ ಧನರಾಶಿಯಿಂದ ತುಂಬಿದ ನಾವೆಯ ರಹಸ್ಯ ವಿಷಯವನ್ನು ತಿಳಿಯ ಬೇಕೆಂದು ಬಯಸುತ್ತೇನೆ" ಎಂದನು.

ಚತುರ್ನೇತ್ರನು ಕೂಡಲೇ ಉತ್ತರ ಕೊಡಲಿಲ್ಲ. ಹೇಳಲೋ ಬಿಡಲೋ ಎಂಬಂತೆ ಸ್ವಲ್ಪ ಹೊತ್ತು ಮೇಲೆ ಕೆಳಗೆ ನೋಡಿ, "ನೋಡಪ್ಪಾ ಸಮರಸೇನಾ, ಆ ನಾವೆ, ಧನರಾಶಿ, ಆ ನಾಗಕನ್ಯೆಯ ಕಥೆ ಅದನ್ನೆಲ್ಲಾ ಹೇಳಬೇಕಾದರೆ ಅದರ ವಿಷಯ ತುಂಬಾ ಇದೆ. ಅದನ್ನೆಲ್ಲಾ ಕೇಳಲು ನಿನಗೆ ಕುತೂಹಲವಿಲ್ಲದೆಯೂ ಹೋಗಬಹುದು. ಚಿಟುಕಾಗಿ ಹೇಳುತ್ತೇನೆ ಕೇಳು. ಬಹುಃಶ ನೀನು ಶಮನದ್ವೀಪದ ಸಮಾಚಾರ ಕೇಳಿರ ಲಿಕ್ಕಿಲ್ಲ. ಒಂದು ವೇಳೆ ಆ ಹೆಸರನ್ನು ಕೇಳಿದ್ದರೂ ಮತ್ತೇನೂ ಗೊತ್ತಿರಲಾರದು. ಕೆಲವರು ಅದನ್ನು ಬೇರೆ ಹೆಸರಿನಿಂದ ಕರೆಯುವುದೂ ಉಂಟು. ಆ ಶಮನ ದ್ವೀಪವನ್ನು ಶಾಕ್ತೇಯನೆಂಬ ರಾಜನು ಆಳುತ್ತಿದ್ದಾನೆ. ಶಾಕ್ತೇಯನೆಂದರೆ ನಿನಗೆ ಗೊತ್ತಿರ ಬಹುದು. ದೊಡ್ಡ ಚಂಡಿಕಾ ಭಕ್ತ. ಮಂತ್ರ ತಂತ್ರ ವಿದ್ಯೆಗಳಲ್ಲಿ ಅವನಿಗೆ ಅವನೇ ಸಾಟಿ.

ಒಂದು ಸಾರಿ ರಾಜಧಾನೀ ನಗರದಲ್ಲಿ ನವರಾತ್ರಿ ಸಮಯದಲ್ಲಿ ದೇವಿಯ ಉತ್ಸವ ನಡೆಯುತ್ತಿತ್ತು. ಆಗ ಶಾಕ್ತೇಯ ರಾಜನು ಸ್ವತಃ ದೇವಿಯ ಪೂಜೆ ಮಾಡುವನು. ಇದ್ದಕ್ಕಿದ್ದಂತೆ ಜನರ ಕೋಲಾಹಲದ ಮಧ್ಯದಲ್ಲಿ ಚಂಡೀದೇವಿ ಹೂಂಕರಿಸಿ ಹೀಗೆಂದಳು: 'ಭಕ್ತ ಜನರೇ! ನಿಮ್ಮ ಭಕ್ತಿಗೆ ಮೆಚ್ಚಿದ್ದೇನೆ. ಆದರೆ ನಿಮ್ಮ ಈ ಬಲಿಪೂಜೆಯಿಂದ ನನಗೆ ತೃಪ್ತಿ ಯಾಗಲಿಲ್ಲ. ನನಗೆ ಅಪೂರ್ವವಾದೊಂದು ಸುಂದರವೂ ಭವ್ಯವೂ ಆದ ಆಲಯವನ್ನು ಕಟ್ಟಿಸಿಕೊಡಬೇಕು.' ದೇವಿಯ ಗಂಭೀರ ಧ್ವನಿಯನ್ನು ಕೇಳಿ ಶಾಕ್ತೇಯನು ನಮಸ್ಕಾರ ಮಾಡಿ, 'ತಾಯೇ! ನಿನಗೆ ದೊಡ್ಡ ದೇವಾಲಯವನ್ನು ನಾನು ಕಟ್ಟಿಸುತ್ತೇನೆ. ಅದರ ಗೋಪುರವನ್ನು ಆಕಾಶಕ್ಕೆ ಮುಟ್ಟಿಸುತ್ತೇನೆ.' ಎಂದು ಹೇಳಿಕೊಂಡನು.

ಅದನ್ನು ಕೇಳಿ ಚಂಡೀ ದೇವಿ ಮತ್ತಿಷ್ಟು ಜೋರಾಗಿ ಹುಂಕರಿಸಿ 'ನನ್ನ ಆಲಯದ ಗೋಪುರವು ಸಾಧಾರಣ ಕಲ್ಲು ಮಣ್ಣುಗಳಿಂದ ಕಟ್ಟಿದರೆ ನಾನು ತೃಪ್ತಳಾಗ ಲಾರೆ. ಎಲ್ಲವನ್ನೂ ಬೆಳ್ಳಿ ಚಿನ್ನಗಳಿಂದಲೇ ಕಟ್ಟಿಸ ಬೇಕು, ಆಗಲೇ ನನಗೆ ತೃಪ್ತಿ. ಇದನ್ನು ನೆನಪಿಟ್ಟುಕೋ' ಎಂದಳು.

ಅದನ್ನು ಕೇಳಿ ಶಾಕ್ತೇಯನು ನಿಂತಲ್ಲೇ ಹೆದರಿ ನಡುಗಿ ನೀರಾದನು. ಚಂಡೀದೇವಿಯ ಆಜ್ಞೆಯನ್ನು ಮೀರುವಂತಿಲ್ಲ. ಆದರೆ ಅಷ್ಟು ದೊಡ್ಡ ದೇವಾಲ ಯಕ್ಕೆ ಬೇಕಾದ ಚಿನ್ನ ಬೆಳ್ಳಿಗಳನ್ನು ಹೇಗೆ ಗಳಿಸು ವುದು?

(ಇನ್ನೂ ಇದೆ)





# ಲೌಕಿಕ ತಿಳಿದವನು

ಹಾರಿ ಹೋಗುವ ಬೇತಾಳವನ್ನು ವಶಪಡಿಸಿಕೊಳ್ಳದೆ ಬಿಡಲಾರೆನೆಂಬ ಹಟದಿಂದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹೊತ್ತುಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗೆ ಸೇರಿಕೊಂಡಿರುವ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ನೀನು ಈ ವಿಧವಾಗಿ ಶ್ರಮಪಡುವುದನ್ನು ನೋಡುತ್ತಿದ್ದರೆ, ನಿನಗೆ ಲೌಕಿಕ ಜ್ಞಾನ ಕಡಮೆಯೋ ಎಂಬ ಸಂದೇಹವಾಗುತ್ತದೆ. ನಿಜಕ್ಕೂ ನೀನು ಲೌಕಿಕ ಜ್ಞಾನಿಯಾಗಿರುತ್ತಿದ್ದರೆ ವರಾಹಶ್ರೇಷ್ಠಿಯ ಹಾಗೆ ಮಹೋನ್ನತ ಸ್ಥಿತಿಗೆ ಬರಬೇಕಿತ್ತು. ನೀನೇನೋ ಇಲ್ಲೇ ಅಲೆದಾಡಿಕೊಂಡಿರುವೆಯಲ್ಲಾ! ನಡೆಯುವ ಕಷ್ಟ ತಿಳಿಯದ ಹಾಗೆ ಆ ವರಾಹಶ್ರೇಷ್ಠಿಯ ಕಥೆ ಹೇಳುತ್ತೇನೆ, ಕೇಳು." ಎಂದು ಕಥೆಯನ್ನು ಹೇಳಲು ತೊಡಗಿತು :

ಧರ್ಮಪುರಿ ರಾಜ್ಯದ ಒಂದು ಗ್ರಾಮದಲ್ಲಿ ವರಾಹನೆಂಬೊಬ್ಬ ವೈಶ್ಯಕುಮಾರನಿದ್ದನು. ಆದರೆ ಅವನ ಹತ್ತಿರ ವ್ಯಾಪಾರಕ್ಕೆ ಹಣವಿರಲಿಲ್ಲ. ವ್ಯಾಪಾರ

ದಲ್ಲಿಯೇ ತನ್ನ ಜೀವಿತವನ್ನು ಕಳೆಯಬೇಕೆಂಬುದು ಅವನ ಲಕ್ಷ್ಯವಾಗಿತ್ತು. ಚಿಲ್ಲರೆ ವ್ಯಾಪಾರ ಮಾಡಲಿಕ್ಕಾದರೂ ಸ್ವಲ್ಪ ಮೂಲ ಧನ ಬೇಕೇ ಬೇಕು. ಅದಕ್ಕಾಗಿ ಅವನು ಗ್ರಾಮದೊಳಗಿನ ಒಬ್ಬ ಬಡ್ಡೀ ಲೇವಾದೇವಿ ನಡೆಸುವವನ ಹತ್ತಿರ ಸ್ವಲ್ಪ ಸಾಲ ತೆಗೆದುಕೊಂಡನು. ಆದರೆ ಆ ಸಣ್ಣ ವ್ಯಾಪಾರವು ಅವನು ಅಂದುಕೊಂಡಂತೆ ಚುರುಕಾಗಿ ಸಾಗದೆ, ಲಾಭವೇನಿಲ್ಲದೆ, ಹೇಳಿದ ಅವಧಿಗೆ ಸಾಲ ತೀರಿಸಲು ಅವನಿಂದಾಗದೆ ಹೋಯಿತು.

ಸಾಲ ಕೊಟ್ಟವನು ಹಣಕ್ಕಾಗಿ ಅವಸರ ಪಡಿಸತೊಡಗಿದನು. ವರಾಹನು ಅವನೊಂದಿಗೆ, "ಸ್ವಲ್ಪ ದಿನ ತಾಳಿರಿ. ರಾಜಧಾನಿಯಿಂದ ನಮ್ಮ ವಾಸುದೇವನು ಬರುತ್ತೇನೆಂದಿದ್ದಾನೆ. ಅವನು ಬಂದ ಕೂಡಲೇ ನಿಮ್ಮ ಸಾಲ ತೀರಿಸಿ ಬಿಡುತ್ತೇನೆ" ಎಂದನು,

"ವಾಸುದೇವರು ನಿಮಗೆ ಗೊತ್ತೆ ?" ಎಂದು ಆಶ್ಚರ್ಯದಿಂದ ಕೇಳಿದನು ಬಡ್ಡೀ ವ್ಯಾಪಾರಿ.

"ಗೊತ್ತೇ ಅಂದರೇನಯ್ಯ ? ಅವನು ನಮ್ಮ ಹತ್ತಿರದ ಬಂಧುವಾಯಿತಲ್ಲಾ !" ಎಂದನು ವರಾಹ.

"ಮತ್ತೆ ಇಷ್ಟು ದಿನ ಆ ಸಂಗತಿ ಹೇಳಲೇ ಇಲ್ಲವಲ್ಲಾ ? ಸರಿಸರಿ ! ನಿಮ್ಮ ಸಾಲ ನಿಧಾನವಾಗಿ ಕೊಡುವಿರಂತೆ. ಬರುತ್ತೇನೆ" ಎಂದು ಹೇಳಿ ಬಡ್ಡೀ ವ್ಯಾಪಾರಿ ಬೇಗಬೇಗನೆ ಹೊರಟು ಹೋದನು.

ಅವನ ಪ್ರವರ್ತನೆ ವರಾಹನಿಗೆ ವಿಚಿತ್ರವಾಗಿ ತೋರಿತು. ಆದರೆ ಅದಕ್ಕೆ ಅರ್ಥವೇನೆಂಬುದು ಮಾರನೇ ದಿನವೇ ಗೊತ್ತಾಗಿ ಬಿಟ್ಟಿತು.

ಮರು ದಿನ ಆ ಬಡ್ಡೀ ವ್ಯಾಪಾರದವನು ಒಬ್ಬ ಹುಡುಗನನ್ನು ತನ್ನೊಂದಿಗೆ ಕರೆದುಕೊಂಡು ವರಾಹನ ಬಳಿಗೆ ಬಂದು, "ನೋಡಿ, ಇವನು ನನ್ನ ಬಾವ ಮೈದುನ. ನೀವು ಒಂದು ಉಪಕಾರ ಮಾಡಬೇಕು, ನಿಮ್ಮ ವಾಸುದೇವರ ಹತ್ತಿರ ಹೇಳಿ, ಅವರ ದಿವಾಣದಲ್ಲಿ ಏನಾದರೊಂದು ಸಣ್ಣ ಕೆಲಸ ಕೊಡಿಸುವ ಹಾಗೆ ಮಾಡಬೇಕು. ನೀವು ಈ ಕೆಲಸ ಮಾಡಿದಿರೆಂದರೆ ನಿಮ್ಮ ಸಾಲ ರದ್ದು ಪಡಿಸುತ್ತೇನೆ." ಎಂದನು.



ತನ್ನ ಮಾತನ್ನು ಬಡ್ಡೀ ವ್ಯಾಪಾರಿ ತಪ್ಪಾಗಿ ತಿಳಿದುಕೊಂಡನೆಂದು ವರಾಹನಿಗೆ ಅರ್ಥವಾಯಿತು. ವರಾಹನ ಬಂಧುವಾದ ವಾಸುದೇವನು ದಿವಾಣ ದಲ್ಲೊಂದು ಸಣ್ಣ ಕೆಲಸದಲ್ಲಿರುವವನು. ಅದೇ ಹೆಸರಿನ ಉನ್ನತಾಧಿಕಾರಿ ಇನ್ನೊಬ್ಬನಿದ್ದನು, ಆ ಉನ್ನತಾಧಿಕಾರಿಯೇ ವರಾಹನ ಬಂಧುವೆಂದುಕೊಂಡು ಬಡ್ಡೀ ವ್ಯಾಪಾರಿ ತನ್ನ ಬಾವಮೈದುನನನ್ನು ಕರೆದು ಕೊಂಡು ಬಂದಿದ್ದಾನೆ. ವರಾಹನ ಬಂಧು ವಾಸು ದೇವನಿಗೆ ಕೆಲಸ ಕೊಡಿಸುವಂತಹ ಯಾವ ತಾಖತ್ತೂ ಇಲ್ಲವೇ ಇಲ್ಲ!

ಬಡ್ಡೀ ವ್ಯಾಪಾರಿ ತಪ್ಪು ತಿಳಿದನೆಂದು ಗೊತ್ತಾದು ದರ ಬೆನ್ನಿಗೇ ವರಾಹನ ಮಿದುಳಿನಲ್ಲಿ ಒಂದು ಆಲೋಚನೆ ಮಿಂಚಿತು. ಇವನ ತಪ್ಪು ತಿಳುವಳಿಕೆ ಯನ್ನೇ ನಿಜಗೊಳಿಸಿ ಬಿಟ್ಟರೆ, ತನ್ನ ಸಾಲವು ರದ್ದಾ ಗುವುದಷ್ಟೇ ಅಲ್ಲದೆ, ಊರೊಳಗೆ ತನ್ನ ವ್ಯಕ್ತಿತ್ವವೂ ಹೆಚ್ಚುತ್ತದೆ. ಈ ಸಂದರ್ಭವನ್ನು ಬಿಡಬಾರದೆಂದು ಕೊಂಡು, "ಸರಿ. ನೋಡುತ್ತೇನೆ. ಯಾವುದಕ್ಕೂ ನೀವು ನಾಳೆ ಬನ್ನಿ" ಎಂದು ಹೇಳಿ ವರಾಹನು ಬಡ್ಡೀ ವ್ಯಾಪಾರಿಯನ್ನು ಕಳುಹಿಸಿ, ರಾಜಧಾನಿಗೆ ಹೋದನು. ಅಲ್ಲಿ ದಿವಾಣದಲ್ಲಿರುವ ತನ್ನ ಬಂಧುವಾದ ವಾಸು ದೇವನನ್ನು ಅವನ ಬಿಡಾರದಲ್ಲಿ ನೋಡಿ, ಅಲ್ಲಿ ಕೆಲಸ ಮಾಡುವ ದೊಡ್ಡ ದೊಡ್ಡ ಉದ್ಯೋಗಸ್ಥರ ಹೆಸರು ಗಳನ್ನೂ, ಪದವಿಗಳನ್ನೂ, ಅವರ ಜೀವನಕ್ಕೆ ಸಂಬಂ ಧಿಸಿದ ಮುಖ್ಯ ಮುಖ್ಯ ವಿವರಗಳನ್ನೂ ಒಂದು ಪುಸ್ತಕದಲ್ಲಿ ಬರೆದುಕೊಂಡನು.

ಆಮೇಲೆ ವರಾಹನು ವಾಸುದೇವನ ಕಚೇರಿಗೆ ಹೋಗಿ ಅಲ್ಲಿರುವವರೊಂದಿಗೆ, "ನನ್ನನ್ನು ಮಂಡ ಲಾಧಿಕಾರಿ ವೀರವರ್ಮರು ಕಳುಹಿಸಿದ್ದಾರೆ. ಅವರ ಬಂಧುವಾದ ಒಬ್ಬ ಹುಡುಗನಿಗೆ ಏನೋ ಒಂದು ಉದ್ಯೋಗವನ್ನು ಕೊಡಿಸ ಬೇಕಂತೆ, ನಾನು ವಾಸು ದೇವರನ್ನು ನೋಡಲು ಬಂದಿದ್ದೇನೆ." ಎಂದನು.

ವರಾಹನಿಗೆ ದೊಡ್ಡ ಅಧಿಕಾರಿ ವಾಸುದೇವನ ದರ್ಶನ ಕೂಡಲೇ ಲಭಿಸಿತು. ವೀರವರ್ಮನ ಹೆಸರು ಕೇಳಿದ ಕೂಡಲೇ ಅವನು, "ಹಾಗೇ ಮಾಡುವೆನೆಂದು





ಹೇಳಿರಿ. ಉದ್ಯೋಗ ಬೇಕಾಗಿರುವ ಹುಡುಗನನ್ನು ನಾಳೆ ನನ್ನ ಹತ್ತಿರ ಕಳುಹಿಸಲಿ," ಎಂದು ಮರ್ಯಾದೆಯಿಂದ ಅವನನ್ನು ಕಳುಹಿಸಿಕೊಟ್ಟನು.

ಆಮೇಲೆ ಬಡ್ಡೀ ವ್ಯಾಪಾರಿಯ ಬಾವ ಮೈದುನನಿಗೆ ಮಾರನೇ ದಿನವೇ ದಿವಾಣದಲ್ಲಿ ಒಂದು ಕೆಲಸ ಸಿಕ್ಕಿಯೇ ಬಿಟ್ಟಿತು. ಈ ಘಟನೆಯಿಂದ ವರಾಹನ ಮೇಲೆ ಎಲ್ಲರಿಗೂ ಒಂದು ವಿಶೇಷ ದೃಷ್ಟಿ. ಅವನು ಒಬ್ಬ ಹುಡುಗನಿಗೆ ದಿವಾಣದಲ್ಲಿ ಉದ್ಯೋಗ ಕೊಡಿಸಿದ ಮಾತು ಊರೆಲ್ಲಾ ಹರಡಿತು. ಅವನಿಗೆ ದಿವಾಣದಲ್ಲಿ ದೊಡ್ಡ ದೊಡ್ಡ ಅಧಿಕಾರಿಗಳ ಹತ್ತಿರ ಪ್ರಭಾವವಿರುವುದೆಂದು ಎಲ್ಲರೂ ಅಂದುಕೊಂಡರು. ಅನೇಕರು ಅವನ ಸ್ನೇಹಕ್ಕಾಗಿಯೂ, ಅವನನ್ನು ಮೆಚ್ಚಿಸಲಿಕ್ಕಾಗಿಯೂ ಏನೇನೋ ಮಾಡತೊಡಗಿದರು. ಉದ್ಯೋಗಗಳು ಬೇಕಾದವರೂ, ದಿವಾಣದಲ್ಲಿರುವ ತಮ್ಮ ಕೆಲಸಗಳು ಅನುಕೂಲವಾಗ ಬೇಕೆಂದಿರುವವರೂ ವರಾಹನು ಕೇಳದೆಯೇ ಅವನಿಗೆ ಕಾಣಿಕೆಗಳನ್ನು ಸಮರ್ಪಿಸಿ, ವಿಜ್ಞಾಪನೆ ಮಾಡಿಕೊಳ್ಳಲೂ ತೊಡಗಿದರು. ಅವನ ಕೈಗೆ ಕನಕ ವರ್ಷಣವೇ ಬೀಳ ತೊಡಗಿತು.

ಈ ರೀತಿಯಾಗಿ ವರಾಹನಿಗೆ ಲೌಕಿಕವು ತುಂಬ ಸಹಾಯಮಾಡಿತು. ಸೇನಾಧಿಪತಿ, ಕೋಶಾಧಿಕಾರಿ, ಮಂಡಲಾಧಿಕಾರಿ, ನ್ಯಾಯಾಧಿಕಾರಿ, ದುರ್ಗಾಧಿಪತಿ ಮೊದಲಾದ ಅತ್ಯುನ್ನತ ಉದ್ಯೋಗದ ಅಧಿಕಾರಿಗಳಿಗೆ ಅವನು ಮೊದಲು ಸ್ನೇಹಿತರ ಸ್ನೇಹಿತನಾಗಿ, ಅನಂತರ ಸ್ವತಃ ಸ್ನೇಹಿತನೂ ಆದನು. ಅವನು ಎಷ್ಟೋ ಜನರ ವ್ಯಾಜ್ಯಗಳನ್ನು ಅನುಕೂಲಪಡಿಸಿದನು. ಎಷ್ಟೋ ಜನರಿಗೆ ಉದ್ಯೋಗ ಕೊಡಿಸಿದನು. ಲಕ್ಷ ಗಟ್ಲೆಯಾಗಿ ಸಂಪಾದಿಸಿ, ರಾಜಧಾನಿಯಲ್ಲೇ ಭಾರೀ ದೊಡ್ಡ ವ್ಯಾಪಾರವನ್ನು ಪ್ರಾರಂಭಿಸಿ ವರಾಹ ಶ್ರೇಷ್ಠಿಯೆಂದು ರಾಜನ ದೃಷ್ಟಿಯಲ್ಲಿಯೂ ಮಂತ್ರಿಗಳ ದೃಷ್ಟಿಯಲ್ಲಿಯೂ ಘನಶಾಲೀ ಮನುಷ್ಯನಾಗಿ ನಿಂತನು. ಯಾವ ದೊಡ್ಡ ಮನುಷ್ಯನ ಮನೆಯಲ್ಲಿ ಏನು ವಿಶೇಷ ನಡೆದರೂ ವರಾಹ ಶ್ರೇಷ್ಠಿ ಕೊಡುವ ಕಾಣಿಕೆಗಳು ಪ್ರಶಸ್ತವೆನಿಸುತ್ತಿದ್ದುವು. ರಾಜನ ಕುಟುಂಬದೊಳಗೆ ಏನಾದರೂ ಜನ್ಮದಿನ ಹಬ್ಬ, ನಾಮಕರಣ, ನಿಶ್ಚಿತಾರ್ಥ ಮೊದಲಾದುವು ನಡೆದಾಗ ವರಾಹ ಶ್ರೇಷ್ಠಿಗೆ ಆಮಂತ್ರಣ ವಿರುತ್ತಿತ್ತು. ಆಗ ವರಾಹ ಶ್ರೇಷ್ಠಿ "ಸಣ್ಣ ಕಾಣಿಕೆ" ಎಂದು ಅಮೂಲ್ಯ ರತ್ನಗಳನ್ನು ಕಾಣಿಕೆ ಕೊಡುವ ಸ್ಥಿತಿಗೆ ಬಂದನು. ಈಗ ಅವನು ಕಾಗೆಯ ಹತ್ತಿರ ಸುದ್ದಿ ಕಳಿಸಿದರೂ ಸಾಕು. ದಿವಾಣದಲ್ಲಿ ಅವನು ಹೇಳುವ ಕೆಲಸ ನಡೆದು ಬಿಡುತ್ತದೆ.

ಒಂದುಸಾರಿ ಮಹಾರಾಜನ ಜನ್ಮದಿನೋತ್ಸವದ ಸಂದರ್ಭದಲ್ಲಿ ಪ್ರತ್ಯೇಕವಾದ ಔತಣ ಕೂಟ ನಡೆಯಿತು. ಅದರಲ್ಲಿ ಅನೇಕ ಉನ್ನತ ಪದವಿಯುವರಷ್ಟೇ ಭಾಗವಹಿಸಿದ್ದರು. ಆ ಸಂದರ್ಭದಲ್ಲಿ ನಡೆದ ವಿನೋದ ಗೋಷ್ಠಿಯಲ್ಲಿ ಒಬ್ಬೊಬ್ಬರೂ

ತಾವು ಹೇಗೆ ಉನ್ನತಿಗೇರಿದೆವೆಂಬುದನ್ನು ಮುಚ್ಚು ಮರೆ ಇಲ್ಲದೆ ಹೇಳಬೇಕೆಂದು ನಿರ್ಣಯಿಸಲ್ಪಟ್ಟಿತು. ಆದರಂತೆ ಎಲ್ಲರೂ ತಮ್ಮ ತಮ್ಮ ವಿಷಯವನ್ನು ಹೇಳಿದರು. ಹೇಳಿದವರು ಅಲ್ಪಸ್ವಲ್ಪ ನಿಜವನ್ನು ಮರೆಸಿಕೊಂಡರಾದರೂ ವರಾಹಶ್ರೇಷ್ಠಿ ಮಾತ್ರ ತನ್ನ ವಿಷಯ ಏನೂ ಮರೆಮಾಜದೆ ಇದ್ದುದು ಇದ್ದ ಹಾಗೆಯೇ ಹೇಳಿದನು. ಅದನ್ನು ಕೇಳಿ ಎಲ್ಲರೂ ಹರ್ಷಗೊಂಡು ಚಪ್ಪಾಳೆ ತಟ್ಟಿದರು.

"ನಿಮ್ಮೆಲ್ಲರಿಗಿಂತಲೂ ವರಾಹಶ್ರೇಷ್ಠಿಯ ಲೌಕಿಕ ಜ್ಞಾನ ದೊಡ್ಡದೇ ಸರಿ!" ಎಂದು ರಾಜನು ವರಾಹ ನನ್ನು ಪ್ರಶಂಸಿಸಿದನು.

ಹೀಗೆ ಬೇತಾಳವು ಕಥೆಯನ್ನು ಮುಗಿಸಿ, "ರಾಜಾ, ವರಾಹನು ಲೌಕಿಕಜ್ಞಾನಿಯಾಗಿರಬಹುದು. ಆದರೆ ಅವನು ಮಾಡಿದ ಕಾರ್ಯಗಳೆಲ್ಲ ಮೋಸತಾನೆ? ಆ ಬಗೆಯ ಮೋಸದಿಂದಲೇ ಲಾಭ ಹೊಂದಿ ಶ್ರೀಮಂತ ನಾಗಿದ್ದಾನೆ. ಹೀಗಿರುವವನನ್ನು ಎಲ್ಲರೂ ಹರ್ಷದಿಂದ ಅಭಿನಂದಿಸುವುದಕ್ಕೂ, ರಾಜನು ಕೂಡಾ ಮೆಚ್ಚಿಗೆ ತೋರಿಸುವುದಕ್ಕೂ ಕಾರಣವೇನು ಹೇಳು ನೋಡೋಣ. ತಿಳಿದುದನ್ನು ಹೇಳದೆ ಹೋದರೆ ನಿನ್ನ ತಲೆ ನೂರು ಹೋಳುಗಳಾಗಿ ಚೆದರುತ್ತದೆಂದು ಗೊತ್ತಿದೆಯಷ್ಟೆ?" ಎಂದು ಸುಮ್ಮನಾಯಿತು. ಕೂಡಲೇ ತ್ರಿವಿಕ್ರಮನು ಹೀಗೆ ಉತ್ತರಕೊಟ್ಟನು:

"ಪ್ರಪಂಚದಲ್ಲಿ ಕೆಲವರು ಉನ್ನತ ಸ್ಥಾಯಿಯಲ್ಲಿ ಹುಟ್ಟುತ್ತಾರೆ, ಕೆಲವುಂದಿ ಸಾಮಾನ್ಯ ಸ್ಥಾಯಿಯಲ್ಲಿ ಹುಟ್ಟಿ ಉನ್ನತ ಸ್ಥಾಯಿಯನ್ನು ತಲಪುತ್ತಾರೆ. ಈ ಎರಡನೇ ಬಗೆಯವರಿಗೆ ಲೋಕ ವ್ಯವಹಾರ ಚೆನ್ನಾಗಿ ತಿಳಿದಿರಬೇಕು. ರಾಜನ ಮಗಂದಿರೂ, ಮಂತ್ರಿಗಳ ಮಕ್ಕಳೂ ಉನ್ನತ ಸ್ಥಿತಿಯಲ್ಲಿರಲು ಲೌಕಿಕಜ್ಞಾನ ಬೇಕಾಗಿಲ್ಲ. ವರಾಹನು ಒಂದು ಸಾರಿ ಉನ್ನತವರ್ಗಕ್ಕೆ ತಲಪಿದ ಮೇಲೆ ಲೌಕಿಕಜ್ಞಾನದ ಅಗತ್ಯಬೇಕಾಗಿ ಬರ ಲಿಲ್ಲ. ಆದರೆ ಒಂದು ಚಿಲ್ಲರೆಯಂಗಡಿ ಇಟ್ಟುಕೊಳ್ಳ ಲಿಕ್ಕೂ ಹಣವಿಲ್ಲದ ದರಿದ್ರ ದಶೆಯಿಂದ, ರಾಜ ಧಾನಿಯ ಉನ್ನತ ವರ್ತಕರ ಮಟ್ಟವನ್ನು ಮುಟ್ಟಿದ ವರಾಹನ ಲೌಕಿಕ ಚಟುವಟಿಕೆಗಳು ಅಸಾಧಾರಣ ವಾದುದೆನ್ನಲು ಸಂಗೇಹವೇ ಇಲ್ಲ. ಒಂದು ಸಾರಿ ಔನ್ನತ್ಯವು ಲಭಿಸಿದ ಮೇಲೆ ಅದು ಹೇಗೆ ಲಭಿಸಿತೆಂದು ಪರೀಕ್ಷಿಸುವ ಗೋಜಿಗೆ ಯಾರೂ ಹೋಗುವುದಿಲ್ಲ. ಹಾಗೆ ಪರೀಕ್ಷಿಸಿ ಬಿಟ್ಟರೆ ಲೋಕ ಜ್ಞಾನದಿಂದ ಮೇಲೆ ಬಂದ ಅನೇಕರು ದಂಡನಾರ್ಹರೇ ಆಗುತ್ತಾರೆ. ಫಲಿ ಸದೇ ಮಧ್ಯದಲ್ಲಿ ಸಿಕ್ಕಿ ಬೀಳುವಂತಹ ಲೌಕಿಕವೇ ಶಿಕ್ಷೆಗೆ ಗುರಿಯಾಗುತ್ತದೆ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವ ಸಹಿತ ಮಾಯವಾಗಿ ಹೋಗಿ ಮರದ ಕೊಂಬೆಗೆ ನೇತು ಹಾಕಿಕೊಂಡಿತು.



# ಮೆತ್ತಗಿನ ಅತ್ತೆ

**ರ**ಮ ಹೊಸತಾಗಿ ಅತ್ತೇಮನೆಗೆ ಬಂದಾಗ ಅತ್ತೆ ತನ್ನನ್ನು ಎಷ್ಟರಮಟ್ಟಿಗೆ ಹುರಿದು ತಿನ್ನುವಳೋ ಎಂದು ಹೆದರಿದ್ದಳು. ಆದರೆ ರಮೆಯ ಅತ್ತೆ ತುಂಬಾ ಸಾಧುಹೆಂಗುಸು. ಅವಳು ರಮೆಯನ್ನು ತಾಯಿಗಿಂತ ಅಕ್ಕರೆಯಾಗಿ ನೋಡುತ್ತಿದ್ದಳು.

ಈ ಸಲಿಗೆಯಿಂದ ರಮೆಗೆ ಒಳ್ಳೆಯದಾಯಿತು. ಅವಳು ಪೂರ್ತಿ ಕೆಲಸಗಳನ್ನು ಅತ್ತೆಗೇ ಬಿಟ್ಟುಕೊಟ್ಟು ತಾನೇನೂ ಮಾಡದೆ ಸುಮ್ಮನಿದ್ದಳು.

ಹೀಗೆ ಅತ್ತೆ ಮೈಮುರಿ ಕೆಲಸ ಮಾಡಿಕೊಂಡಿರಲು, ಸೌಖ್ಯದಲ್ಲಿರುವ ರಮೆಯನ್ನು ನೋಡಲು ಅವಳ ಅಣ್ಣನು ಬಂದನು.

ಅವನಿಗೆ ಹೊಸತಾಗಿ ಮದುವೆಯಾಗಿತ್ತು. ಅಂತಲೇ ರಮೆ ಅಣ್ಣನನ್ನು ನೋಡಿ, "ಅಣ್ಣಾ, ನಿನ್ನ ಹೆಂಡ್ತಿ ಮಾಲತಿಯಿಂದ ಅಮ್ಮನಿಗೆ ಹಗುರಾಯಿತೆ? ಮನೆ ಕೆಲಸವೆಲ್ಲಾ ಸರಿಯಾಗಿ ಮಾಡುತ್ತ ಅಮ್ಮನಿಗೆ ವಿಶ್ರಾಂತಿ ಕೊಡುತ್ತಾಳೆಯೆ?" ಎಂದು ಕೇಳಿದಳು.

"ಮಾಲತಿ ಯಾವಕೆಲಸವೂ ಮಾಡುವುದಿಲ್ಲ. ಈಗ ಅಮ್ಮನಿಗೆ ಕೆಲಸ ಹೆಚ್ಚೇ ಆಯಿತು" ಎಂದ ರಮೆಯ ಅಣ್ಣ.

ರಮೆ ಕೋಪದಿಂದ, "ಅದೇನಣ್ಣ? ಮಾಲತೀನ ತೌರುಮನೆಗೆ ಕಳಿಸಿಬಿಡು. ಹಾಗೆ ಮಾಡಿದರಷ್ಟೇ ಅವಳಿಗೆ ಬುದ್ಧಿ ಬರುತ್ತೆ" ಎಂದಳು.

"ಹಾಗೇ ಅಂದುಕೊಂಡಿದ್ದೆ. ಆದರೆ ಇಲ್ಲಿ ನಿನ್ನ ಸ್ಥಿತಿ ನೋಡಿ ಆ ಆಲೋಚನೆ ಬಿಟ್ಟೆ. ನಾನು ಮಾಲತಿಯನ್ನು ಕಳಿಸಿಬಿಟ್ಟರೆ, ಮರುದಿನವೇ ಬಾವ ನಿನ್ನನ್ನು ನಮ್ಮ ಮನೆಗೆ ಕಳಿಸುತ್ತಾರೆ. ನಿನ್ನ ಅತ್ತೆಗೆ ಕೂಡಾ ನಿನ್ನಿಂದಾಗಿ ಕೆಲಸ ಹೆಚ್ಚಾಯಿತಂತೆ!" ಎಂದ ರಮೆಯ ಅಣ್ಣ.

ಆ ಮಾತಿನಿಂದ ರಮೆಗೆ ಬುದ್ಧಿ ಬಂದು, ಮನೆಕೆಲಸಗಳನ್ನು ಮಾಡಲು ತೊಡಗಿದಳು.






# ವಿದ್ಯಾನ್ವಿತನ ಲೋಪ

**ಪೂ**ರ್ವ ಕಾಲದಲ್ಲಿ ಜ್ಞಾನಪ್ರಿಯನೆಂಬ ಒಬ್ಬ ಯುವಕನಿದ್ದನು. ಅವನು ಚಿಕ್ಕತನದಿಂದಲೂ ಕಾಶಿಯಲ್ಲಿದ್ದು, ದೊಡ್ಡ ದೊಡ್ಡ ಗುರುಗಳನ್ನು ಆಶ್ರಯಿಸಿ, ಶ್ರದ್ಧೆಯಿಂದ ಸೇವಾಶುಶ್ರೂಷೆಗಳನ್ನು ಮಾಡಿ, ಎಲ್ಲಾ ವಿದ್ಯೆಗಳನ್ನೂ ಅಭ್ಯಾಸ ಮಾಡಿದನು. ಅಲ್ಲಿ ಕಲಿಯು ವಂಥಾದ್ದನ್ನೆಲ್ಲಾ ಕಲಿತು ಮುಗಿಸಿ ಬಿಡುಗಡೆ ಹೊಂದಿದನು. ಅವನ ಪಾಂಡಿತ್ಯವೂ, ಶಾಸ್ತ್ರ ಪರಿಜ್ಞಾನವೂ ಎಲ್ಲರೂ ಮೆಚ್ಚುವಂತಿದ್ದುವು.

ಆದರೆ ಜ್ಞಾನಪ್ರಿಯನಿಗೆ ಏನೋ ಒಂದು ಅಸಂತೃಪ್ತಿ ಅಂಟಿಕೊಂಡಿತ್ತು, "ನಾನು ಇಷ್ಟೆಲ್ಲಾ ವಿದ್ಯೆಗಳನ್ನು ಕಲಿತರೂ ಜೀವನ ಯಾತ್ರೆಗೆ ಸುಗಮವಾಗುವಂತಹ ಒಂದು ವಿದ್ಯೆಯೂ ನನ್ನ ವಿದ್ಯೆಗಳಲ್ಲಿ ಇರುವಂತೆ ಕಾಣುವುದಿಲ್ಲ. ನನ್ನ ಓದಿನಲ್ಲಿ ಏನೋ ಲೋಪವಾಗಿದೆ. ಅದನ್ನು ನಿವಾರಿಸಿಕೊಂಡ ಹೊರತು ಸಂಸಾರ ಸಾಗರಕ್ಕೆ ಇಳಿಯಬಾರದು. ಯಾರನ್ನಾದರೂ ಆಶ್ರಯಿಸಿ ಆ ಲೋಪವನ್ನು ಪರಿಹರಿಸಿಕೊಳ್ಳಬೇಕು." ಎಂದು ತನ್ನೊಳಗೆ ನಿಶ್ಚಯಿಸಿಕೊಂಡನು.

ಜ್ಞಾನಪ್ರಿಯನು ಅನೇಕ ಪಂಡಿತರ ಬಳಿಗೆ ಹೋದನು. ತಾನು ಓದಿದ ವಿದ್ಯೆಗಳನ್ನು ಕುರಿತು ಅವರೊಂದಿಗೆ ಹೇಳಿ, "ನನ್ನ ವಿದ್ಯೆ ಪೂರ್ತಿಯಾಗಲಿಕ್ಕೆ ಇನ್ನೇನು ಕಲಿಯಬೇಕೆಂಬುದನ್ನು ದಯಮಾಡಿ ತಿಳಿಸಿರಿ!" ಎಂದು ಅವರನ್ನು ಕೇಳಿದನು. ಅವರು ಅನೇಕ ಪ್ರಶ್ನೆಗಳನ್ನು ಮಾಡಿ, "ಇನ್ನೇನಿಲ್ಲ. ನಿನ್ನ ಓದು ಸಂಪೂರ್ಣವಾಗಿದೆ. ಇನ್ನೇನೋ ಕಲಿಯಲಿದೆ ಎಂಬ ಸಂದೇಹವನ್ನು ಬಿಡು." ಎಂದರು.

ಕಡೆಗೆ ಒಬ್ಬ ವೃದ್ಧನು ಮಾತ್ರ, "ಅಪ್ಪಾ, ನೀನು ಕಲಿತ ವಿದ್ಯೆಗಳಲ್ಲಿ, ಮೇಲು ನೋಟಕ್ಕೆ ನೀನು ಉತ್ತೀರ್ಣನಾಗಿರುವುದು ನಿಜ. ಆದರಲ್ಲಿರುವ ಮುಖ್ಯವಾದೊಂದು ಕೊರತೆಯನ್ನು ಕಳೆದುಕೊಳ್ಳಬೇಕಾದರೆ ಅದಕ್ಕೆ ತಕ್ಕವನು ಒಬ್ಬನೇ ಒಬ್ಬನಿದ್ದಾನೆ. ಅವನು ಕಮ್ಮಾರ ಕೆಲಸ ಮಾಡುತ್ತ ಪಕ್ಕದ ಗ್ರಾಮದಲ್ಲಿದ್ದಾನೆ. ಅವನಿಗೆ ಗುರು ಶುಶ್ರೂಷೆ ಮಾಡು. ಅವನಿಂದ ನಿನ್ನ ವಿದ್ಯೆ ಖಂಡಿತವಾಗಿ ಪೂರ್ತಿಯಾಗುತ್ತದೆ" ಎಂದನು.

ಈ ಮಾತಿನ ಮೇಲೆ ಜ್ಞಾನಪ್ರಿಯನಿಗೆ ನಂಬುಗೆಯುಂಟಾಯಿತು. ಇನ್ನು ತನ್ನ ವಿದ್ಯೆ ಪೂರ್ತಿಯಾಗುವುದೆಂಬ ಆನಂದದಿಂದ ಅವನು ಹೇಳಿದ ಪ್ರಕಾರ ಆ ಕಮ್ಮಾರನನ್ನು ಹುಡುಕುತ್ತಾ ಹೋಗಿ

ಕುಲಿಮೆಯ ಮುಂದೆ ತಿದಿ ಒತ್ತುತ್ತಾ ಇದ್ದ ಆ ಕಮ್ಮಾರನಿಗೆ ಸಾಷ್ಟಾಂಗ ನಮಸ್ಕಾರಮಾಡಿ, "ನನ್ನ ಎಲ್ಲಾ ವಿದ್ಯೆಗಳೂ ಪೂರ್ತಿಯಾಗಿವೆ. ಅದರಲ್ಲಿ ಜೀವನಕ್ಕೆ ಅಗತ್ಯವಾದುದೇನೋ ಲೋಪವಾಗಿದೆ. ಅದನ್ನೊಂದು ಕಲಿಸಿಬಿಡಿ." ಎಂದು ತಾನು ಕಲಿತ ಎಲ್ಲಾ ವಿದ್ಯೆಗಳ ವಿಷಯವನ್ನೂ ಹೇಳಿದನು.

ಕಮ್ಮಾರನು ಎಲ್ಲವನ್ನೂ ಕೇಳಿ, ತಿದಿಯ ಹತ್ತಿರದಿಂದ ಎದ್ದು, "ಇಲ್ಲಿ ಕುಳಿತು ತಿದಿ ಒತ್ತು" ಎಂದನು. ಜ್ಞಾನಪ್ರಿಯನು ಕುಲಿಮೆಯ ಮುಂದೆ ಕುಳಿತು ತಿದಿ ಒತ್ತ ತೊಡಗಿದನು.

ಆ ದಿನ ಕಳೆದು ಹಾಗೆಯೇ ಒಂದು ವಾರ ವಾಯಿತು. ತಿಂಗಳೂ ಆಯಿತು. ಜ್ಞಾನಪ್ರಿಯನು ದಿನಾ ತಿದಿ ಒತ್ತುತ್ತಲೇ ಇದ್ದನು. ಕಮ್ಮಾರನು ಅವನೊಂದಿಗೆ ಮತ್ತೇನೂ ಹೇಳಲಿಲ್ಲ. "ನಾನು ಬಂದ ಉದ್ದೇಶ ಇವರಿಗೆ ಗೊತ್ತಿದೆ. ಜ್ಞಾಪಕ ಪಡಿಸುವುದು ಸರಿಯಲ್ಲ" ಎಂದುಕೊಂಡು ಜ್ಞಾನಪ್ರಿಯನು ಸುಮ್ಮನೆ ತಿದಿ ಒತ್ತುತ್ತಿದ್ದನು.

ಒಂದು ವರ್ಷಕಳೆದರೂ ಕಮ್ಮಾರನು ತನ್ನ ಸಂಗತಿ ಮಾತಾಡದಿರುವುದನ್ನು ನೋಡಿ ಜ್ಞಾನಪ್ರಿಯನು ಖಿನ್ನನಾಗಿ, ಒಂದು ದಿನ "ಸ್ವಾಮಿ, ನನ್ನ ವಿದ್ಯೆ" ಎಂದು ಬಾಯಿ ತೆರೆಯುತ್ತಲೇ, ಕಮ್ಮಾರನು "ತಿದಿ ಒತ್ತು" ಎಂದನು.

ಕಮ್ಮಾರಗುರು ಮತ್ತೇನೂ ಹೇಳಲಿಲ್ಲ. ಜ್ಞಾನಪ್ರಿಯನೂ ಮತ್ತೆ ಆ ಪ್ರಸಕ್ತಿ ಎತ್ತಲೇ ಇಲ್ಲ. ಈ ವಿಧವಾಗಿ ಐದು ವರ್ಷಗಳು ಕಳೆದುವು. ಜ್ಞಾನಪ್ರಿಯನ ಸಹನಶಕ್ತಿಗೆ ಅಲ್ಲಿದ್ದವರೆಲ್ಲ ಆಚ್ಚರಿ ಪಡುತ್ತಿದ್ದರು.

ಒಂದು ದಿನ ಬೆಳಿಗ್ಗೆ ಜ್ಞಾನಪ್ರಿಯನು ಕುಲಿಮೆಯ ಮುಂದೆ ತಿದಿ ಒತ್ತಲು ಕುಳಿತಾಗ, ಕಮ್ಮಾರನು ಬಂದು ಅವನ ಭುಜವನ್ನು ತಟ್ಟಿದನು. ಜ್ಞಾನಪ್ರಿಯನು ತಟ್ಟನೆದ್ದು ಅವನಿಗೆ ನಮಸ್ಕಾರ ಮಾಡಿ ತಲೆತಗ್ಗಿಸಿ ನಿಂತನು.

"ಅಪ್ಪಾ, ನಿನ್ನ ವಿದ್ಯೆಗಳಲ್ಲಿದ್ದ ಲೋಪ ಕಳೆದು ಹೋಯಿತು. ನಿನ್ನ ವಿದ್ಯೆಗಳಲ್ಲಿ ಯಾವುದಾದರೂ ಇನ್ನು ನಿನ್ನ ಜೀವನಕ್ಕೆ ಸಹಾಯವಾಗುತ್ತದೆ. ಮದುವೆಯಾಗಿ ಸಂಸಾರ ಸಾಗರದಲ್ಲಿ ಸುಖವಾಗಿ ಈಜಾಡಬಲ್ಲೆ. ಜೀವನಕ್ಕೆ ಸಹಾಯವಾದ, ಎಲ್ಲಾ ವಿದ್ಯೆಗಳನ್ನೂ ಮೀರಿಸುವಂತಹ ಸಹನೆಯನ್ನು ಈಗ ನೀನು ಸಾಧಿಸಿಬಿಟ್ಟೆ" ಎಂದನು ಕಮ್ಮಾರ.

ಜ್ಞಾನಪ್ರಿಯನು ಅತ್ಯಾನಂದದಿಂದ ತನ್ನ ಗುರುವಿನಿಂದ ಅಪ್ಪಣೆ ಪಡೆದು ಮನೆಗೆ ಹೋದನು. ತರುವಾಯ ಗೃಹಸ್ಥ ಧರ್ಮವನ್ನು ಸ್ವೀಕರಿಸಿ ಸುಖವಾಗಿರುತ್ತ, ಮಹಾ ಜ್ಞಾನಿಯೆಂದು ಹೆಸರು ಪಡೆದನು.





# ಅಳಿಯುವ ಶಕ್ತಿ

ಒಂದಾನೊಂದು ಕಾಲದಲ್ಲಿ ರಾಮಶಾಸ್ತ್ರಿ ಎಂಬ ಬಡ ಬ್ರಾಹ್ಮಣನೊಬ್ಬನಿದ್ದನು. ಅವನಿಗೆ ನಾಲ್ಕು ಮಂದಿ ಹೆಣ್ಣು ಮಕ್ಕಳೇ ಹುಟ್ಟಿದ್ದರು. ಆ ಬಡ ಬ್ರಾಹ್ಮಣನು ನಾಲ್ಕು ಮಂದಿ ಹೆಣ್ಣು ಮಕ್ಕಳಿಗೂ ಮದುವೆಮಾಡಿ ಅತ್ತೆಯ ಮನೆಗೆ ಕಳುಹಿಸುವಷ್ಟರಲ್ಲಿ, ತಲೆಯ ಮೇಲೆ ಮಾರುದ್ದ ನೀರು ಎಂಬಷ್ಟು ಸಾಲದಲ್ಲಿ ಮುಳುಗಿ ಹೋದನು. ಆಮೇಲೆ ಸಾಲದ ವರಿಗೆ ಮೋರೆ ತೋರಿಸಲು ನಾಚಿಕೊಂಡು, ಒಂದು ದಿನ ಮಧ್ಯರಾತ್ರಿಯ ಹೊತ್ತಿನಲ್ಲಿ ಸದ್ದುಗದ್ದಲವಿಲ್ಲದೆ ಮನೆಬಿಟ್ಟು ಊರುಬಿಟ್ಟು ಹೊರಟು ಹೋದನು.

ಕತ್ತಲೆಯ ದಾರಿಯಲ್ಲಿ ಅವನು ಒಂದೇ ಸಮನೆ ನಡೆಯುತ್ತಿರಲು, ಯಾವುದೋ ಒಂದು ಊರು ದಾಟಿ ದೊಡ್ಡದೊಂದು ಆಲದಮರದ ಬುಡವನ್ನು ತಲಪಿದನು. ಆ ಮರದ ಮೇಲೆ ಕೆಲವು ನೂರು ವರ್ಷಗಳಿಂದ ಒಬ್ಬ ಬ್ರಹ್ಮರಾಕ್ಷಸನು ವಾಸವಾಗಿದ್ದನು. ಆ ಸಮಾಚಾರ ಅಲ್ಲಿಯ ಸುತ್ತು ಮುತ್ತಣ ಗ್ರಾಮದಲ್ಲಿರುವವರಿಗೆಲ್ಲಾ ಗೊತ್ತಿತ್ತು. ಅಂತಲೇ ಹಚ್ಚ ಹಗಲಿನಲ್ಲಿ ಕೂಡಾ ಆ ಮರದ ಕಡೆಗೆ ಯಾರೂ ಹೋಗಲಾರರು. ಅದರಿಂದ ರಾತ್ರಿಯ ಹೊತ್ತಿನಲ್ಲಿ ತಾನಿರುವ ಮರದ ಬುಡಕ್ಕೆ ಬಂದು ಏನೂ ಹೆದರದೆ ದಾಟಿ ಹೋಗುತ್ತಿರುವ ರಾಮಶಾಸ್ತ್ರಿಯನ್ನು ನೋಡಿ, ಬ್ರಹ್ಮರಾಕ್ಷಸನು ಆಶ್ಚರ್ಯಪಡುತ್ತ, "ನಿಲ್ಲು. ನಿಲ್ಲೋ !" ಎಂದು ಗಟ್ಟಿಯಾಗಿ ಕೂಗಿದ.

ರಾಮಶಾಸ್ತ್ರಿಗೆ ಒಂದು ಕ್ಷಣ ಎದೆಯೊಳಗೆ ಧಸಕ್ಕೆಂದಿತು. ಆದರೆ ಸಹಜವಾಗಿ ಸಮಯ ಸ್ಫೂರ್ತಿಯುಳ್ಳವನೂ, ಧೈರ್ಯಶಾಲಿಯೂ ಆದವ ನಾದುದರಿಂದ ನಾಲ್ಕು ಮಂದಿ ಹೆಣ್ಣು ಮಕ್ಕಳ ಮದುವೆಮಾಡಿ ಎಲ್ಲಾ ಬಗೆಯ ಭಯಗಳನ್ನೂ ಅನುಭವಿಸಿ ದಡ್ಡು ಗಟ್ಟಿದ ಮನಸ್ಸಿನವನಾದುದ ರಿಂದ, ಈಗ ಕೇಳಿಸಿದ ಈ ಅಶರೀರಿಯ ಆರ್ಭಟದ ಭಯವನ್ನು ಜಯಿಸಿ, "ಯಾರದು ನನ್ನನ್ನು ನಿಲ್ಲೂ ಅನ್ನೋದು ?" ಎಂದು ಗಟ್ಟಿಯಾಗಿ ಕೇಳಿದನು.

ತನ್ನ ಶಬ್ದ ಕೇಳಿದ ಕೂಡಲೇ ಹೆದರಿ ಮೂರ್ಛೆ ಬೀಳ ಬೇಕಾಗಿದ್ದ ಮನುಷ್ಯ, ಇದಿರು ಪ್ರಶ್ನೆ ಹಾಕುವುದು ಕೇಳಿ ಬ್ರಹ್ಮರಾಕ್ಷಸನಿಗೆ ಬೆರಗು ಬಡೆಯಿತು. ಇದು ತನಗೆ ಅವಮಾನವೆಂದು ಬ್ರಹ್ಮ ರಾಕ್ಷಸನಿಗೆ ತೋರಿತು. ಕೂಡಲೇ ಅವನು ಮರದ ಮೇಲಿನಿಂದ ರಾಮಶಾಸ್ತ್ರಿಯ ಮುಂದೆ ದಭಾಲ್ಲನೆ

**ಬಿ. ವಕುಳಾದೇವಿ**




ಈ ಪ್ರಾಂತದಲ್ಲಿ ಹೆದರದ ನರರೇ ಇಲ್ಲ! ನಾನು ಬ್ರಹ್ಮರಾಕ್ಷಸ ಗೊತ್ತಾ? ಮೂರು ನೂರು ವರ್ಷಗಳಿಂದ ಈ ಮರದ ಮೇಲಿದ್ದೇನೆ!" ಎಂದನು.

ರಾಮಶಾಸ್ತ್ರಿ ನಂಬಲಾಗದವನಂತೆ ರಾಕ್ಷಸನನ್ನು ನೋಡಿ, "ಹಾಗಿಲ್ಲ ನೀನು. ಬ್ರಹ್ಮರಾಕ್ಷಸ ಹೇಗಿದ್ದಾನೆಂದು ನನಗೆ ಗೊತ್ತಿಲ್ಲ ಅಂದುಕೊಂಡೆಯಾ? ನೀನು ನಿಜಕ್ಕೂ ಬ್ರಹ್ಮರಾಕ್ಷಸನಾಗಿರುತ್ತಿದ್ದರೆ ಹೆದರಿಕೆಯಿಂದ ಯಾವಾಗಲೋ ಸತ್ತು ಬಿಡುತ್ತಿದ್ದೆನಲ್ಲ! ನಿನ್ನನ್ನು ನೋಡಿದರೆ ನನ್ನ ಅಳಿಯಂದಿರನ್ನು ಕಂಡರೆ ಆಗುವ ಭಯದ ಕಾಲಂಶದಷ್ಟು ಕೂಡಾ ಭಯ ಆಗುವುದಿಲ್ಲ!" ಎಂದನು.

ಆ ಮಾತು ಕೇಳಿ ರಾಕ್ಷಸನಿಗೆ ಅತ್ಯಾಶ್ಚರ್ಯವಾಯಿತು. ಅವನು ತನ್ನ ಶರೀರವನ್ನೊಮ್ಮೆ ನೋಡಿಕೊಂಡನು. ಅದನ್ನು ನೋಡಿ ರಾಮಶಾಸ್ತ್ರಿ ಮತ್ತೆ ಹೀಗೆಂದನು:

"ನಿನ್ನ ಕಣ್ಣುಗಳು ತುಂಬ ಅಂದವಾಗಿ ಆಕರ್ಷಣೀಯವಾಗಿ, ಸೌಮ್ಯವಾಗಿ ಕಾಣುತ್ತವೆ. ನೀನು ಬಹಳ ಕೋಪ ಬಂದಿರುವುದೆಂದು ಹೇಳುತ್ತೀ. ನೀನು ಎಷ್ಟೇ ಕೋಪದಿಂದ ನೋಡಿದರೂ ನನ್ನ ದೊಡ್ಡ ಅಳಿಯನ ಕಣ್ಣುಗಳಲ್ಲಿರುವ ಕೋಪದಲ್ಲಿ ನೂರರಲ್ಲೊಂದು ಪಾಲು ಕೂಡಾ ನಿನ್ನ ಕಣ್ಣಿನಲ್ಲಿಲ್ಲ! ನಿನ್ನ ಕೂಗಾಟ ನಮ್ಮ ಅಳಿಯಂದಿರ ನಗುವಿಗಿಂತ ಕೇಳಲು ಸೊಂಪಾಗಿದೆ! ನೀನೆಂಥ ಬ್ರಹ್ಮರಾಕ್ಷಸನೋ?"

ಬ್ರಹ್ಮರಾಕ್ಷಸನು ತನ್ನ ಆಶ್ಚರ್ಯವನ್ನು ಸಮಾಳಿಸಿಕೊಳ್ಳಲು ಯೋಚಿಸುತ್ತ, "ಹಾಗೋ? ನರಮಾನವರಲ್ಲಿ ನನಗಿಂತ ಭಯಂಕರರು ಇರುವುದು ಸಾಧ್ಯವೆ? ಈ ಮುನ್ನೂರು ವರ್ಷಗಳಲ್ಲಿ ಮಾನವರ ಶಕ್ತಿ ಅಷ್ಟು ಹೆಚ್ಚಿತೇನೋ?" ಎಂದು ತನ್ನೊಳಗೆ ಅಂದುಕೊಂಡು, ಸಂದೇಹ ನಿವೃತ್ತಿ ಮಾಡಿಕೊಳ್ಳಲಿಕ್ಕಾಗಿ, "ಹಾಗೇಕೆ ಹೇಳುವಿಯೋ ನರನೇ? ನನಗೆ ಇಲ್ಲ

ಹಾರಿ, "ನಾನು ಯಾರೆಂದು ಗೊತ್ತಾಗಲಿಲ್ಲವೇನೋ?" ಎಂದು ಕೂಗಿ ಕೇಳಿದನು.

ರಾಮಶಾಸ್ತ್ರಿ ಅವನ ಗುರುತು ತಿಳಿಯದವನಂತೆ ಬೆಪ್ಪು ಮೋರೆ ಮಾಡಿಕೊಂಡು, "ನೆನಪಿಲ್ಲವಲ್ಲಾ? ಯಾರಪ್ಪಾ ನೀನು? ಇಂಥಾ ಕತ್ತಲೆ ರಾತ್ರಿಯ ಹೊತ್ತಿನಲ್ಲಿ ನೀನೇಕೆ ಇಲ್ಲಿಗೆ ಬಂದೆಯೋ? ದಾರಿಯಲ್ಲಿ ಹಲ್ಲಿಹರಣೆ ಹಾವುಗಳಿದ್ದಾವಲ್ಲ? ನೋಡಿದರೆ ನೀನು ತುಂಬಾ ನಾಜೂಕಿನ ಸೊರಕಲನಾಗಿರುವಿ!" ಎಂದನು ತುಂಬಾ ಧೈರ್ಯದಿಂದ.

ತಾನು ನಿಜಕ್ಕೂ ಎಲ್ಲರೂ ಅಂದುಕೊಳ್ಳುವಷ್ಟು ಭಯಂಕರ ರೂಪದವನಾಗಿ ಇಲ್ಲವೇನೋ ಎಂದು ಬ್ರಹ್ಮರಾಕ್ಷಸನಿಗೆ ಅನುಮಾನವಾಯಿತು. ಅವನು ರಾಮಶಾಸ್ತ್ರಿಯನ್ನು ಸಂದೇಹದಿಂದ ನೋಡುತ್ತ, "ಏಯ್, ನರಮನುಷ್ಯಾ! ನನ್ನ ಮುಂದೆ ಕಳ್ಳ ಸೋಗು ತೋರಿಸುವಿಯಾ? ನನ್ನನ್ನು ನೋಡಿ ನಿಜಕ್ಕೂ ನೀನು ಹೆದರುವುದಿಲ್ಲವೇ? ನಾನೇದರೆ

ದಂಥಾ ಶಕ್ತಿಗಳು ನಿನ್ನ ಅಳಿಯಂದಿರಿಗೆ ಹೇಗೆ ಬಂತು ? ಏನನ್ನು ತಿಂದರು ?" ಎಂದು ಕೇಳಿದನು.

ರಾಮಶಾಸ್ತ್ರಿ ಬ್ರಹ್ಮರಾಕ್ಷಸನನ್ನು ಕನಿಕರದಿಂದ ನೋಡುತ್ತ, "ಅಸಲು ನಿನಗೆ ಮದುವೆಯಾಗಿ ಯಾರಿಗಾದರೂ ಅಳಿಯನಾಗಿರುವೆಯಾ ? ಅದನ್ನು ಮೊದಲು ಹೇಳು " ಎಂದನು.

"ಇಲ್ಲ. ಮದುವೆಯಾದರೆ ಏನಾಗುತ್ತದೆ ?" ಎಂದು ಬ್ರಹ್ಮರಾಕ್ಷಸನು ಪ್ರಶ್ನೆ ಮಾಡಿದ.

"ಅಯ್ಯಾ ಮುಗ್ಧಮಿದುಳಿನವನೇ ! ಮದುವೆಯ ಮಂತ್ರಗಳಿಗೆ ಎಷ್ಟೊಂದು ಶಕ್ತಿಯಿರುವುದೆಂದು ನಿನಗೆ ತಿಳಿಯದೆ ? ಆ ಮಂತ್ರಗಳ ಪ್ರಭಾವದಿಂದ ಸಾಧಾರಣ ಮನುಷ್ಯರೇ ಅಳಿಯಂದಿರಾಗಿ ಅಪಾರ ವಾದ ಶಕ್ತಿಯನ್ನು ಸಂಪಾದಿಸಿಕೊಳ್ಳುತ್ತಾರೆ. ನನ್ನ ಅಳಿಯ ಕೋಪದಿಂದ ನೋಡಿದರೆ ಸಾಕು. ನಾನೂ ನನ್ನ ಮಗಳೂ, ನನ್ನ ಹೆಂಡತಿಯೂ ಎಲ್ಲಿದ್ದರಲ್ಲಲ್ಲೇ ಹೆದರಿ ನೀರಾಗಿ ಹೋಗುತ್ತೇವೆ. ಇನ್ನು ಕೋಪದಿಂದ ಕೂಗಾಡಿದನೆಂದರೆ ಕೇಳುವುದೇ ಬೇಡ. ಎಲ್ಲರೂ ಚಾಪೆಸುತ್ತಿ ಬಿದ್ದ ಹಾಗೆ ಅವನ ಕಾಲ ಬುಡದಲ್ಲಿ ಬಿದ್ದು ಬಿಡುತ್ತೇವೆ. ನಿನ್ನ ಈ ಕೋಪವೂ ಆರ್ಭಟೆಯೂ ನನ್ನ ಮೇಲೆ ಯಾವ ಪರಿಣಾಮವೂ ಮಾಡದಿರಲು ಅದೇ ಕಾರಣ" ಎಂದು ರಾಮಶಾಸ್ತ್ರಿ ಬ್ರಹ್ಮರಾಕ್ಷಸನಿಗೆ ಉಪಾಧ್ಯಾಯನ ಹಾಗೆ ಬೋಧನೆ ಮಾಡಿದನು.

ಬ್ರಹ್ಮರಾಕ್ಷಸನು ಆಲೋಚನೆಗೆ ಬಿದ್ದನು. ಈ ಬ್ರಾಹ್ಮಣನು ಹೇಳುವ ಹಾಗೆ ಮದುವೆಯಾದ ಕೂಡಲೇ ಮಾನವರಿಗೆ ಅಷ್ಟು ಶಕ್ತಿ ಹೆಚ್ಚುವುದು ನಿಜವಾದ ಪಕ್ಷಕ್ಕೆ, ತನ್ನನ್ನು ನೋಡಿ ಹೆದರುವವರೇ ಇಲ್ಲದೆ ಹೋಗುತ್ತಾರೆ. ಇದು ತನ್ನ ಬ್ರಹ್ಮರಾಕ್ಷ ಸತ್ವಕ್ಕೆ ಅವಮಾನ ! ಆದುದರಿಂದ ತಾನು ಕೂಡಾ ಮದುವೆಯಾಗಿ ಶಕ್ತಿಯನ್ನು ಹೆಚ್ಚಿಸಿಕೊಳ್ಳಲೇಬೇಕು

ಹೀಗೆ ಅಂದುಕೊಳ್ಳುತ್ತಿರುವ ಬ್ರಹ್ಮರಾಕ್ಷಸನನ್ನೇ ನೋಡುತ್ತಿರುವ ರಾಮಶಾಸ್ತ್ರಿ ಅವನ ಆಲೋಚನೆಯ



ಬಗೆಯನ್ನು ಊಹಿಸಿ, "ನೀನಾದರೂ ಬ್ರಹ್ಮಚಾರಿ ಯಾಗಿಯೇ ಎಷ್ಟುಕಾಲ ಇರಬಲ್ಲೆ ? ಬೇಗ ಒಂದು ಮದುವೆ ಮಾಡಿಕೊಂಡು ಎಲ್ಲರನ್ನೂ ನಿನ್ನ ಅಂಕೆ ಯಲ್ಲಿ ಇಟ್ಟುಕೊಳ್ಳುವ ಶಕ್ತಿಪಡೆ" ಎಂದು ಹೇಳಿ ಅಲ್ಲಿಂದ ಕದಲಿದನು.

ಬ್ರಹ್ಮರಾಕ್ಷಸನಿಗೆ ರಾಮಶಾಸ್ತ್ರಿಯ ಆಲೋಚನೆ ಹಿಡಿಸಿತು. ಅವನು ರಾಮಶಾಸ್ತ್ರಿಯನ್ನು ಹಿಂದಕ್ಕೆ ಕರೆದು, "ನೋಡಯ್ಯಾ, ನನಗೆ ಯಾರು ತಾನೇ ಹುಡುಗಿ ಕೊಟ್ಟಾರು? ನನಗೊಂದು ಹುಡುಗಿಯನ್ನು ನೀನೇ ನೋಡಬೇಕು !" ಎಂದನು.

"ನಿನ್ನ ತಲೆ ಮೆಟ್ಟಿ ಹಾರುವಂಥ ಬಂಟರು ಮನುಷ್ಯರಲ್ಲಿ ಬಹಳ ಮಂದಿ ಇದ್ದಾರೆ ! ಯಾರಾ ದರೂ ಹೆಣ್ಣು ಹೆತ್ತವರು ತಮ್ಮ ಮಗಳನ್ನು ಹೆಚ್ಚಿನ ವನಿಗೇ ಕೊಡಬೇಕೆಂದಿರುತ್ತಾರೆಯೇ ಹೊರತು, ನಿನ್ನಂಥ ದಡ್ಡನಿಗೂ ಬಡವನಿಗೂ ಕೊಡಲು ಮುಂದೆ ಬರುವರೆ ?" ಎಂದನು ರಾಮಶಾಸ್ತ್ರಿ.

ಬ್ರಹ್ಮರಾಕ್ಷಸನಿಗೆ ಮದುವೆ ಮಾಡಿಕೊಳ್ಳ ಬೇಕೆಂತಲೂ, ಮದುವೆಯ ಮೂಲಕ ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕೆಂತಲೂ ಬಲವಾದ ಕೋರಿಕೆಯುಂಟಾಯಿತು. ಅವನು ಕೈ ಮುಗಿದು ರಾಮಶಾಸ್ತ್ರಿಯನ್ನು ಬೇಡ ತೊಡಗಿದನು.

ರಾಮಶಾಸ್ತ್ರಿ ಅವನಿಂದ ತುಂಬಾ ಬೇಡಿಸಿಕೊಂಡ ಮೇಲೆ, "ಅದು ಅಷ್ಟು ಸುಲಭ ಅಲ್ಲವಯ್ಯಾ. ತುಂಬಾ ಹಣ ಖರ್ಚು ಆಗುತ್ತದೆ. ಹುಡುಗಿಯನ್ನು ಹುಡುಕಲಿಕ್ಕೇ ತುಂಬಾ ಅಲೆಯಬೇಕು. ನಿನ್ನ ಮನೆ ಈ ಆಲದ ಮರ ಎಂದು ಹೇಳಿದರೆ ಯಾರು ತಾನೇ ಹೆಣ್ಣು ಕೊಟ್ಟಾರು ?" ಎಂದನು.

"ಹಣಕ್ಕಾಗಿ ನೀನು ಹಿಂಜರಿಯಬೇಕಾಗಿಲ್ಲ. ಹುಡುಗಿಯನ್ನು ಹುಡುಕಲಿಕ್ಕೆ ಬೀಳುವ ಖರ್ಚುಗಳ ಮೇಲೆ, ನಿನಗೆ ಬಹುಮಾನ ಕೂಡಾ ಕೊಡುತ್ತೇನೆ. ಮದುವೆಯಾದ ಮೇಲೆ ಈ ಆಲದ ಮರವನ್ನು ಬಿಟ್ಟು ದೊಡ್ಡ ಅರಮನೆಗೇ ಹೋಗುತ್ತೇನೆ" ಎಂದು ಹೇಳಿ ಬ್ರಹ್ಮರಾಕ್ಷಸನು, ಬಂಗಾರದ ನಾಣ್ಯಗಳಿರುವ ಒಂದು ಬಿಂದಿಗೆಯನ್ನು ತಂದು ರಾಮಶಾಸ್ತ್ರಿಗೆ ಕೊಟ್ಟನು.

ರಾಮಶಾಸ್ತ್ರಿ ಸರಿಯೆಂದು ತಲೆಯಾಡಿಸಿ, "ಆದರೆ ಒಂದು ಷರತ್ತು. ನಾನು ಹುಡುಗಿಯನ್ನು ನೋಡಿ ನಿರ್ಣಯಿಸುವವರೆಗೂ ನೀನು ಯಾರಿಗೂ ಕಾಣ ಬಾರದು. ಮದುಮಗಳು ಸಂಸಾರ ಹೂಡಬೇಕಾದುದು ಮರದ ಮೇಲೆ ಎಂದು ತಿಳಿದರೆ ಬರುವ ಸಂಬಂಧಗಳೆಲ್ಲ ಕಡಿದು ಹೋಗುತ್ತವೆ. ನಿನ್ನನ್ನು ನೋಡಿದ ಜನರು ನೀನು ಬಲವಿಲ್ಲದವನೆಂದು ಪ್ರಚಾರ ಮಾಡಿದರೂ ಸಹ ಯಾರೂ ಹುಡುಗಿ ಕೊಡಲು ಮುಂದೆ ಬಾರರು ! ಎಷ್ಟೋ ಉತ್ತಮ ಮನುಷ್ಯರಿರುವಾಗ ಹುಡುಗಿಯನ್ನು ತಂದು ನಿನ್ನಂಥ ಸೊರಕಲು ಬ್ರಹ್ಮರಾಕ್ಷಸನಿಗೆ ಕೊಡುವುದರಿಂದ ಅಲ್ಪರಾಗಿ ಹೋಗುವೆವೆಂದು ಭಾವಿಸುವರು." ಎಂದನು.

ರಾಮಶಾಸ್ತ್ರಿಯ ಮಾತು ಬ್ರಹ್ಮರಾಕ್ಷಸನಿಗೆ ಸಮಂಜಸವೆನಿಸಿತು. ತಾನು ಮದುವೆಯಾಗುವವರೆಗೂ ಯಾರ ಕಣ್ಣಿಗೂ ಬೀಳಲಾರೆನೆಂದು ರಾಮಶಾಸ್ತ್ರಿಗೆ ಮಾತು ಕೊಟ್ಟನು. ಆಮೇಲೆ ಆ ಬ್ರಹ್ಮರಾಕ್ಷಸನನ್ನು ಆ ಮರದ ಮೇಲೆ ಯಾರೂ ನೋಡಲಿಲ್ಲ. ಆ ಮರದ ಮೇಲೆ ಒಂದು ಕಾಲದಲ್ಲಿ ಬ್ರಹ್ಮರಾಕ್ಷಸನಿದ್ದನೆಂದು ಮುದುಕರು ಹೇಳಿದರೆ, "ಇವೆಲ್ಲಾ ನಿಮ್ಮ ಮೂಢ ನಂಬುಗೆಗಳು !" ಎಂದು ಉತ್ತರ ಕೊಡುತ್ತಿದ್ದರು.

ಹೀಗೆ ಧೈರ್ಯಶಾಲಿಯಾದ ರಾಮಶಾಸ್ತ್ರಿ ಬ್ರಹ್ಮರಾಕ್ಷಸನು ಕೊಟ್ಟ ಬಂಗಾರದ ನಾಣ್ಯಗಳ ಬಿಂದಿಗೆಯೊಂದಿಗೆ ಮನೆಗೆ ಹಿಂದಿರುಗಿ, ಅಳಿಯಂದಿರ ಆಶೆಗಳನ್ನೆಲ್ಲಾ ತೀರಿಸಿ ತಾನೂ ಹಾಯಾಗಿ ಬದುಕಿದನು.





# ಅರಮನೆಯ ನಾಯಿಗಳು

ಬ್ರಹ್ಮದತ್ತನು ಕಾಶೀರಾಜ್ಯವನ್ನು ಪರಿಪಾಲಿಸಿ ಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ರಾಜಧಾನಿಗೆ ಸಮೀಪದಲ್ಲಿದ್ದ ರುದ್ರಭೂಮಿಯ ಪ್ರಾಂತದಲ್ಲಿ ನಾಯಿಯಾಗಿ ಹುಟ್ಟಿದನು. ನೂರಾರು ನಾಯಿಗಳಿಗೆ ಅವನೇ ಹಿರಿಯನು. ನಾಯಿಗಳೆಲ್ಲಾ ಅವನನ್ನು ತಮ್ಮ ಒಡೆಯನೆಂದುಕೊಂಡಿದ್ದುವು.

ಒಂದು ದಿನ ರಾಜನು ತನ್ನ ರಥ ಎಲ್ಲೆಲ್ಲಿಯೋ ವಿಹಾರ ಮಾಡಿ ಸಾಯಂಕಾಲದ ಸಮಯದಲ್ಲಿ ರಾಜಧಾನಿಗೆ ಹಿಂದಿರುಗಿ ಬಂದನು. ರಾಜಭವನದ ವಠಾರದೊಳಗೆ ಅವನು ರಥದಿಂದಿಳಿದ ಮೇಲೆ, ಪರಿಚಾರಕರು ರಥಾಶ್ವಗಳನ್ನು ಅಶ್ವಶಾಲೆಗೆ ತೆಗೆದುಕೊಂಡು ಹೋಗಿ, ರಥವನ್ನು ಅರಮನೆಯ ಬದಿಯಲ್ಲಿ ನಿಲ್ಲಿಸಿಟ್ಟರು. ಆ ದಿನ ರಾತ್ರಿ ಭಾರಿ ಮಳೆ ಬಂದು ರಥವು ಚೆನ್ನಾಗಿ ನೆನೆದು ಹೋಯಿತು, ಅದರಲ್ಲಿದ್ದ ಚರ್ಮಗಳ ವಾಸನೆಗೆ ಅರಮನೆಯ ನಾಯಿಗಳು ಆಕರ್ಷಿತವಾಗಿ ಬಂದು ರಥದಲ್ಲಿದ್ದ ಚರ್ಮದ ಸಾಮಗ್ರಿಗಳೆಲ್ಲವನ್ನೂ ಸಾಧ್ಯವಾದಷ್ಟರ ಮಟ್ಟಿಗೆ ಕಡಿದೂ ಜಗಿದೂ ವಿಕೃತಗೊಳಿಸಿದುವು, ಮರುದಿನ ಬೆಳಿಗ್ಗೆ ಪರಿಚಾರಕರು ರಾಜನ ಬಳಿಗೆ ಹೋಗಿ ಆ ಸಮಾಚಾರವನ್ನು ಹೇಳಿದರು. ಅದನ್ನು ಕೇಳಿ ರಾಜನು ಅತ್ಯಂತ ಕೋಪದಿಂದ, "ಹಾಳಾದ ನಾಯಿಗಳು ನನ್ನ ರಥಕ್ಕೆ ಇಷ್ಟು ದೊಡ್ಡ ಹಾನಿ ಮಾಡಿದುವೇ? ಊರೊಳಗೆ ಕಣ್ಣಿಗೆ ಬಿದ್ದ ನಾಯಿಗಳನ್ನೆಲ್ಲಾ ಕೊಂದುಹಾಕಿರಿ!" ಎಂದು ಆಜ್ಞೆ ಮಾಡಿದನು.

ರಾಜಾಜ್ಞೆಯಿಂದ ರಾಜಭಟರು ಊರೂರು ತಿರುಗುತ್ತ, ರಾಜ್ಯದೊಳಗಿನ ನಾಯಿಗಳನ್ನು ವಧಿಸಲು ಪ್ರಾರಂಭಿಸಿದರು. ಕೆಲವು ನಾಯಿಗಳು ರಾಜಭಟರ ಕಣ್ಣು ತಪ್ಪಿಸಿ ಬೋಧಿಸತ್ವನಿರುವ ರುದ್ರಭೂಮಿಯ ಕಡೆಗೆ ಹೋಗಿ ತಮ್ಮ ಒಡೆಯ ನಾಯಿಯೊಂದಿಗೆ "ಅಯ್ಯಾ! ರಾಜನ ರಥದಲ್ಲಿದ್ದ ಚರ್ಮದ ಸಾಧನಗಳನ್ನು ಯಾವುದೋ ನಾಯಿಗಳು ಕಡಿದು ತಿಂದು ಹಾಕಿದುವಂತೆ. ರಾಜನು ಕಂಡ ನಾಯಿಗಳನ್ನೆಲ್ಲಾ ಕೊಂದುಹಾಕಲು ಆಜ್ಞಾಪಿಸಿದ್ದಾನೆ. ನಮಗೆಲ್ಲಾ ಪ್ರಾಣಭೀತಿಯುಂಟಾಗಿದೆ" ಎಂದು ಮೊರೆಯಿಟ್ಟುವು.

ಬೋಧಿಸತ್ವನು ಅವುಗಳ ಮಾತುಕೇಳಿ ತುಂಬಾ ಚಿಂತಿಸಿದನು. ರಾಜಭವನದ ಹತ್ತಿರಕ್ಕೆ ಹೊರಭಾಗದ ನಾಯಿಗಳು ಕೋಟೆ ಕಾವಲುಗಳನ್ನು ದಾಟ

ಹೋಗಲು ಸಾಧ್ಯವಿಲ್ಲ. ರಾತ್ರಿ ಹಗಲೂ ಕಾವಲುಗಾರರು ಕಟ್ಟೆಚ್ಚರದಲ್ಲಿರುತ್ತಾರೆ. ಆದುದರಿಂದ ರಥಕ್ಕೆ ಸಂಬಂಧಿಸಿದ ಚರ್ಮ ಸಾಧನಗಳನ್ನು ಕೋಟೆಯೊಳಗಿರುವ ಅರಮನೆಯ ನಾಯಿಗಳೇ ತಿಂದಿರಬೇಕು. ತಪ್ಪು ಮಾಡಿದ ನಾಯಿಗಳನ್ನು ರಾಜನಿಗೆ ತೋರಿಸಿ, ರುಜುಪಡಿಸಿ, ಶ್ವಾನ ಪರಿವಾರವನ್ನು ರಕ್ಷಿಸಬೇಕಾಗಿದೆ.

ಹೀಗೆಂದುಕೊಂಡು ಬೋಧಿಸತ್ವನು ನಾಯಿಗಳನ್ನು ನೋಡಿ, "ಇನ್ನು ನೀವೇನೂ ಭಯಪಡಬೇಕಾಗಿಲ್ಲ. ನಾನು ಈಗಲೇ ರಾಜನ ಬಳಿಗೆ ಹೋಗಿ, ಹಿಂದಿರುಗಿ ಬರುವ ವರೆಗೂ ಇಲ್ಲಿಯೇ ಇರಿ" ಎಂದು ಹೇಳಿ "ಧರ್ಮಕ್ಕೆ ಜಯವಾಗಲಿ. ರಾಜನು ನ್ಯಾಯವನ್ನು ಪಾಲಿಸಲಿ!" ಎಂದು ಮನಸ್ಸಿನಲ್ಲಿ ಹೇಳಿಕೊಂಡು ರಾಜಭವನದ ಕಡೆಗೆ ಹೊರಟನು.

ಆ ಸಮಯದಲ್ಲಿ ರಾಜನು ಸಭಾ ಭವನದಲ್ಲಿ ಸಿಂಹಾಸನದ ಮೇಲೆ ಕುಳಿತುಕೊಂಡು, ನ್ಯಾಯ ವಿಚಾರಣೆ ನಡೆಸುತ್ತಾ ತೀರ್ಪು ಹೇಳುತ್ತಿದ್ದನು. ಬೋಧಿಸತ್ವನು ಸಿಂಹಾಸನದ ಕೆಳಗಿನಿಂದ ತೂರಿಕೊಂಡು ಹೋಗಿ ಒಮ್ಮೆಗೇ ರಾಜನ ಮುಂದೆ ನಿಂತನು. ಅಕಸ್ಮಾತ್ತಾಗಿ ಬಂದ ನಾಯಿಯನ್ನು ನೋಡಿ ರಾಜ ಭಟರು ಹಿಡಿಯಲು ನೋಡಿದರು. ಆದರೆ ರಾಜನು ಅವರನ್ನು ತಡೆದನು.

ಬೋಧಿಸತ್ವನು ರಾಜನಿಗೆ ನಮಸ್ಕಾರ ಮಾಡಿ, "ಮಹಾರಾಜಾ! ನೀನು ರಾಜ್ಯದೊಳಗಿನ ನಾಯಿಗಳನ್ನೆಲ್ಲಾ ಕೊಲ್ಲಲು ಆಜ್ಞೆ ಮಾಡಿದೆಯಂತೆ, ನಿಜವೇನು? ನಿಜವಾದರೆ ಅದಕ್ಕೆ ಕಾರಣವೇನೆಂದು ಹೇಳಬೇಕು. ನಾನು ನಾಯಿಗಳಿಗೆಲ್ಲಾ ಹಿರಿಯನಾದುದರಿಂದ ಕೇಳುತ್ತಿದ್ದೇನೆ" ಎಂದನು ಗಂಭೀರವಾಗಿ.

"ಹೌದು. ನಾಯಿಗಳು ನನ್ನ ರಥದಲ್ಲಿದ್ದ ಚರ್ಮ ಸಾಧನಗಳನ್ನು ತಿಂದು ಹಾಕಿದುವು. ಅದಕ್ಕೇ ಅಂತಹ ಆಜ್ಞೆ ಕೊಡಬೇಕಾಗಿ ಬಂತು." ಎಂದನು ರಾಜ.

"ಹಾಗೆ ಮಾಡಿದುದು ತಪ್ಪು ನಿಜ. ಆ ತಪ್ಪನ್ನು ಮಾಡಿದ ನಾಯಿಗಳು ಯಾವುವೆಂದು ನಿಮಗೆ



ಗೊತ್ತಾಯಿತೇ ?" ಎಂದು ಬೋಧಿಸತ್ವನು ಕೇಳಿದನು. ಅದಾವುವೂ ತಿಳಿಯದೆಂಬಂತೆ ರಾಜನು ತಲೆಯಾಡಿಸಿದನು. ಅದನ್ನು ನೋಡಿ ಬೋಧಿಸತ್ವನು, "ಮಹಾರಾಜಾ, ತಪ್ಪು ಮಾಡಿದ ನಾಯಿಗಳು ಯಾವುವೆಂದು ತಿಳಿಯದೆ, ತಿಳಿದುಕೊಳ್ಳಲು ಪ್ರಯತ್ನಿಸದೆ, ಕುರುಡುತನದಿಂದ ರಾಜ್ಯದೊಳಗಿನ ನಾಯಿಗಳನ್ನೆಲ್ಲಾ ಕೊಲ್ಲುವಂತೆ ಆಜ್ಞೆ ಮಾಡಿದೆಯಲ್ಲಾ ? ಇದು ಯಾವ ಬಗೆಯ ನ್ಯಾಯ ? ನಿನ್ನ ಭಟರು ಎಲ್ಲಾ ನಾಯಿಗಳನ್ನೂ ಕೊಲ್ಲುವರೋ, ಅಥವಾ ಕೆಲವನ್ನು ಪ್ರಾಣದಿಂದ ಬಿಡುವರೋ ?" ಎಂದು ಕೇಳಿದನು.

"ರಾಜ್ಯದೊಳಗಿನ ನಾಯಿಗಳನ್ನೆಲ್ಲಾ ಕೊಲ್ಲಬೇಕೆಂದು ಆಜ್ಞೆ ಮಾಡಿದ್ದೇನೆ. ನಾನು ಸಾಕುವ ನಾಯಿಗಳಿಗೆ ಯಾವ ಕೇಡೂ ಬಾರದು. ಅವುಗಳಿಗೇನೂ ಭಯವಿಲ್ಲ." ಎಂದನು ರಾಜ.

"ತಪ್ಪು ಮಾಡಿದ ನಾಯಿಗಳು ಯಾವುವೆಂದು ನಿನಗೆ ತಿಳಿಯದು. ನಿನ್ನ ಸಾಕಣೆಯಲ್ಲಿರುವ ನಾಯಿಗಳನ್ನು ಬಿಟ್ಟು ಉಳಿದುವನ್ನೆಲ್ಲಾ ಕೊಲ್ಲಬೇಕೆಂಬುದು ಅಮಲಿನಲ್ಲಿರುವ ರಾಜಾಜ್ಞೆ. ನೀನು ಪಕ್ಷಪಾತ, ದ್ವೇಷ, ಅವಿವೇಕ, ಭಯ ಎಂಬ ನಾಲ್ಕು ಅವಗುಣಗಳಿಂದ ಕಷ್ಟಪಡುತ್ತಿರುವಿ. ಇವು ಎಷ್ಟು ಮಾತ್ರಕ್ಕೂ ರಾಜನಿಗೆ ಇರಬೇಕಾದ ಗುಣಗಳಲ್ಲ" ಎಂದನು ಬೋಧಿಸತ್ವ.

ರಾಜನು ಸ್ವಲ್ಪ ಹೊತ್ತು ಆಲೋಚನೆ ಮಾಡಿ, "ಆದರೆ ಶ್ವಾನನಾಯಕನಾದ ನೀನು ನಿನ್ನ ಬುದ್ಧಿಬಲವನ್ನು ಪಯೋಗಿಸಿ, ನನ್ನ ರಥದ ಚರ್ಮಸಾಮಗ್ರಿಗಳನ್ನು ತಿಂದ ನಾಯಿಗಳು ಯಾವುವೆಂದು ಹೇಳಬಲ್ಲೆಯಾ ?" ಎಂದು ಕೇಳಿದನು.

"ಆ ತಪ್ಪು ಮಾಡಿದ ನಾಯಿಗಳು ನಿಮ್ಮ ಸಾಕಣೆಯಲ್ಲಿರುವ ಅರಮನೆಯ ನಾಯಿಗಳೇ. ಅದನ್ನು ರುಜುಪಡಿಸಿ ತೋರಿಸುತ್ತೇನೆ." ಎಂದನು ಬೋಧಿಸತ್ವ.

"ಹಾಗೆಯೇ ಮಾಡು. ಆ ಕೂಡಲೇ ನನ್ನ ಆಜ್ಞೆಯನ್ನು ಹಿಂದೆಗೆದುಕೊಳ್ಳುತ್ತೇನೆ," ಎಂದನು ರಾಜ.



ಬೋಧಿಸತ್ವನು ರಾಜನೊಂದಿಗೆ ಸ್ವಲ್ಪ ಮಜ್ಜಿಗೆಯನ್ನೂ, ಕರಿಕೆ ಹುಲ್ಲುಗಳನ್ನೂ ತರಿಸಲು ಹೇಳಿದನು. ಪರಿಚಾರಕರು ಅವುಗಳನ್ನು ತರಿಸಿದ ಕೂಡಲೇ, ಬೋಧಿಸತ್ವನು ಕರಿಕೆ ಹುಲ್ಲನ್ನು ಅರೆಯಿಸಿ ಮಜ್ಜಿಗೆಯಲ್ಲಿ ಬೆರೆಸಿ ಅರಮನೆಯ ನಾಯಿಗಳಿಗೆ ಅದನ್ನು ಕುಡಿಸಿದನು.

ಅನಂತರ ಕೆಲವು ನಿಮಿಷಗಳು ಕಳೆಯುವಷ್ಟರಲ್ಲಿ ಅರಮನೆಯ ನಾಯಿಗಳು ವಾಂತಿ ಮಾಡಲು ತೊಡಗಿದುವು. ಅವು ತಿಂದ ಚರ್ಮದ ಚೂರುಗಳು ಇನ್ನೂ ಪೂರ್ತಿ ಜೀರ್ಣವಾಗಲಿಲ್ಲವಾದುದರಿಂದ ಅವೆಲ್ಲಾ ಹೊರಬಿದ್ದುವು.

ಇದನ್ನು ನೋಡಿ ಆಶ್ಚರ್ಯ ಪಡುತ್ತಿದ್ದ ರಾಜನೊಂದಿಗೆ ಬೋಧಿಸತ್ವನು, "ಮಹಾರಾಜಾ, ನಿನ್ನ ಪರಿಚಾರಕರು ನಾಯಿಗಳಿಗೆ ಸರಿಯಾಗಿ ಆಹಾರ ಕೊಡದಿದ್ದ ಕಾರಣದಿಂದ ಅವು ಹಸಿವೆಯಿಂದ ನಿನ್ನ ರಥದ ತೊಗಲಿನ ಸಾಧನಗಳನ್ನು ಹರಿದು ತಿಂದಿವೆ. ಹೊಟ್ಟೆ ತುಂಬಿಕೊಂಡಿದ್ದರೆ ಇಂಥ ತಪ್ಪು ಮಾಡಲಾರವು. ಇದೇ ನಿಜ ಸಂಗತಿ!" ಎಂದನು.

ರಾಜನು ಅತ್ಯಂತ ಸಂತೋಷದಿಂದ, "ಈತನು ಶ್ವಾನರೂಪದಲ್ಲಿರುವ ಬೋಧಿಸತ್ವನಲ್ಲದೆ ಬೇರೆ ಯಾರೂ ಅಲ್ಲ" ಎಂದು ಸಭೆಯ ಮುಂದೆ ಹೇಳಿ ಆ ಶ್ವಾನ ನಾಯಕನನ್ನು ಶ್ವೇತ ಛತ್ರ ಮೊದಲಾದ ರಾಜಗೌರವಗಳಿಂದ ಪೂಜಿಸಿದನು.

ಬೋಧಿಸತ್ವನು ರಾಜನಿಗೆ ಧರ್ಮಬೋಧೆ ಮಾಡಿ, ರುದ್ರಭೂಮಿಯಲ್ಲಿದ್ದ ತನ್ನ ಪರಿವಾರವನ್ನು ಕಲೆತುಕೊಳ್ಳಲು ಹೊರಟನು.

ರಾಜನು ಅರಮನೆಯ ನಾಯಿಗಳ ಪೋಷಣೆಯನ್ನು ನೋಡಿಕೊಳ್ಳುವ ಸೇವಕರನ್ನು ಕರೆಯಿಸಿ, ಅವರು ಸ್ವಲ್ಪ ಧನವನ್ನು ಅಪಹರಿಸುವುದನ್ನೂ, ನಾಯಿಗಳಿಗೆ ಸರಿಯಾಗಿ ಆಹಾರ ಕೊಡದಿರುವುದನ್ನೂ ವಿಚಾರಿಸಿ ತಿಳಿದನು. ಅವರನ್ನು ತಕ್ಕಂತೆ ಶಿಕ್ಷಿಸಿ, ಬೇರೆಯವರಿಗೆ ನಾಯಿಗಳ ಪೋಷಣೆಯನ್ನು ಒಪ್ಪಿಸಿದನು.

ಅಂದಿನಿಂದ ರಾಜನ ವಠಾರದೊಳಗಿನ ನಾಯಿಗಳಿಗೆ ಮಾತ್ರವಲ್ಲದೆ, ರಾಜ್ಯದೊಳಗಿನ ನಾಯಿಗಳೆಲ್ಲವಕ್ಕೂ ಸರಿಯಾದ ಆಹಾರ ಕೊಡಲು ಬೇಕಾದ ಏರ್ಪಾಡುಗಳನ್ನು ಮಾಡಿಸಿದನು ಆ ರಾಜ.

ಆಮೇಲೆ ರಾಜನು ಬೋಧಿಸತ್ವನ ಬೋಧನೆಗಳನ್ನು ಕೇಳುತ್ತ ತನ್ನ ಜೀವಿತ ಕಾಲದಲ್ಲಿ ಅನೇಕ ಸತ್ಕಾರ್ಯಗಳನ್ನು ಮಾಡಿದನು.

ಬೋಧಿಸತ್ವನು ಅನೇಕ ಸಂವತ್ಸರಗಳ ವರೆಗೆ ಲೋಕಕ್ಕೆ ಧರ್ಮೋಪದೇಶ ಮಾಡಿ, ಲೋಕೋದ್ಧಾರಕನೆನಿಸಿದನು.





# ನಿಜವಾದ ವಿಜಯ

ಭಾರತದೇಶ ಚರಿತ್ರೆಯಲ್ಲಿ ಅಶೋಕ ಅಥವಾ ಅಶೋಕವರ್ಧನನು ಅತ್ಯಂತ ಪ್ರಮುಖನೆನ್ನಬಹುದು. ಅವನು ಮೌರ್ಯ ಚಂದ್ರಗುಪ್ತನ ಮೊಮ್ಮಗ. ಅವನಿಂದಲೇ ಬೌದ್ಧ ಮತವು ವ್ಯಾಪ್ತಿಗೊಂಡಿತು.

ಬಿಂದುಸಾರನಿಗೆ ಅನೇಕಮಂದಿ ಹೆಂಡತಿಯರೂ ಅನೇಕಮಂದಿ ಕುಮಾರರೂ ಇದ್ದರು. ಯಾವನೋ ಮುನಿಯನ್ನು ಸಂದರ್ಶಿಸಲಿಕ್ಕಾಗಿ ರಾಜಕುಮಾರರೆಲ್ಲಾ ರಾಜಪ್ರಾಂಗಣದಲ್ಲಿ ಸಮಾವೇಶಗೊಂಡು, ತಮ್ಮ ತಮ್ಮ ಆಸನಗಳಲ್ಲಿ ಕುಳಿತಿದ್ದರು. ಹುಡುಗನಾದ ಅಶೋಕನು ಬಂದಾಗ ಅವನಿಗೆ ಆಸನವಿರಲಿಲ್ಲ.





ಅಶೋಕನು ನೆಲದ ಮೇಲೆ ಕುಳಿತನು. ಬಿಂದುಸಾರನು ಮುನಿಯನ್ನು ಕರೆದುಕೊಂಡು ಅಲ್ಲಿಗೆ ಬಂದನು. ದೊರಗು ನೆಲದ ಮೇಲೆ ಏಕೆ ಕುಳಿತೆಯೆಂದು ಮುನಿ ಪ್ರಶ್ನಿಸಲು ಅಶೋಕನು, "ಭೂಮಾತೆಗಿಂತ ಉತ್ತಮ ಆಸನವಿಲ್ಲ. ಅದು ಎಂದಿಗೂ ಮೋಸಮಾಡದು" ಎಂದನು.



ಅಶೋಕನಲ್ಲಿ ಕೆಲವು ಅಪೂರ್ವ ಲಕ್ಷಣಗಳಿವೆ ಯೆಂದೂ, ಇತರರ ಮೇಲೆ ಅವನ ಪ್ರಭಾವವು ಪ್ರಕಾಶಿಸುವುದೆಂದೂ ಮುನಿ ಬಿಂದುಸಾರ ಮಹಾರಾಜನೊಂದಿಗೆ ಹೇಳಿದನು. ಅಶೋಕನು ದೊಡ್ಡವನಾದ ಮೇಲೆ, ಬಿಂದುಸಾರನು ಅವನನ್ನು ಮಾಲ್ವಾದೇಶದ ಪಾಲಕನಾಗಿ ಉಜ್ಜಯಿನಿಗೆ ಕಳುಹಿಸಿದನು.

ಕ್ರಿ. ಪೂ. ೨೭೩ ರಲ್ಲಿ ಬಿಂದುಸಾರನು ತೀರಿ ಹೋದನು. ಈ ವಾರ್ತೆ ತಿಳಿದ ಕೂಡಲೇ ಅಶೋಕನು ಪಾಟಲೀಪುತ್ರಕ್ಕೆ ಬಂದನು. ತನ್ನ ಅನಂತರ ಯಾರು ಪಾಲಿಸಬೇಕೆಂದು ರಾಜನು ಪ್ರಕಟಿಸಿರಲಿಲ್ಲ. ಪರಿಸ್ಥಿತಿ ಅನಿಶ್ಚಿತವಾಗಿತ್ತು.





ಆದರೆ ಅಶೋಕನು ರಾಜಧಾನಿಗೆ ಬಂದ ಕೂಡಲೇ ಅನಿಶ್ಚಿತ ಪರಿಸ್ಥಿತಿ ತೊಲಗಿ ಹೋಯಿತು. ಅವನು ತನ್ನ ಪರಿಪಾಲನಾ ದಕ್ಷತೆಯನ್ನು ಈ ಮೊದಲೇ ವ್ಯಕ್ತಪಡಿಸಿದ್ದನು. ಅಲ್ಲದೆ ಧೈರ್ಯವಂತನಾದ ಅವನನ್ನು ನಿರ್ದಯಿ ಎಂದೂ ಹೇಳಬಹುದು. ಅವನನ್ನು ಯಾರೂ ನಿರೋಧಿಸುವವರಿಲ್ಲದ್ದರಿಂದ ಅವನೇ ಸಿಂಹಾಸನವನ್ನು ಏರಿದನು.

ಅಶೋಕನು ಉನ್ನತವಾದ ಆಶಯುಗಳುಳ್ಳವನು. ಅವನನ್ನು ಚಂಡಾಶೋಕನೆನ್ನುವವರೂ ಇದ್ದಾರೆ. ಅವನು ಮಹಾಸಾಮ್ರಾಜಕ್ಕೆ ಅಧಿಪತಿಯಾಗ ಬೇಕೆಂದುಕೊಂಡು ದೊಡ್ಡ ಸೇನೆಯನ್ನೂ, ಸಮರ್ಥರಾದ ಸೇನಾಪತಿಗಳನ್ನೂ ಶೇಖರಿಸಿ ಕೊಂಡನು.





ಮೊದಲು ಚಿಕ್ಕಚಿಕ್ಕ ರಾಜ್ಯಗಳನ್ನು ಒಳಪಡಿಸಿ ಕೊಂಡು ವಿಸ್ತಾರವಾದ ಕಳಿಂಗ ರಾಜ್ಯದ ಮೇಲೆ ದಂಡೆತ್ತಿದನು. ಅನೇಕ ದಿನಗಳವರೆಗೆ ಮಹಾ ದಾರುಣವಾದ ಯುದ್ಧವು ನಡೆಯಿತು. ಕಳಿಂಗ ಸೈನಿಕರೇನೂ ಸೋಲಲಿಲ್ಲ. ಆದುದರಿಂದ ಅಶೋಕನ ಸೈನಿಕರು ಅವರನ್ನು ತರಿತರಿದು ಕೆಡವಿ ಯುದ್ಧ ಮುಗಿಸಿದರು.

ಆ ಯುದ್ಧದಲ್ಲಿ ಒಂದು ಲಕ್ಷಮಂದಿ ಸಾಯುವು ದನ್ನು ಅಶೋಕನು ಒಂದು ಬೆಟ್ಟದ ಮೇಲೆ ನಿಂತು ನೋಡಿದನು. ಸತ್ತವರ ಎರಡು ಪಾಲು ಗಾಯಗೊಂಡು ನರಳುವವರು. ಒಂದೂವರೆ ಲಕ್ಷಮಂದಿ ಬಂದಿಗಳಾಗಿ ಸಿಕ್ಕಿದವರು. ವಿಜಯಿ ಯಾದ ಅಶೋಕನು ವಿಚಾರಕ್ಕೆ ಗುರಿಯಾದನು.





ತೀವ್ರವಾದ ಪಶ್ಚಾತ್ತಾಪದಿಂದ ಅಶೋಕನು ರಾಜಧಾನಿಗೆ ಹಿಂದಿರುಗಿದನು. ಒಬ್ಬ ಬೌದ್ಧ ಭಿಕ್ಷು ಅವನೊಂದಿಗೆ "ನಿಜವಾದ ವಿಜಯವು ಕತ್ತಿಯಿಂದ ಆಗುವುದಿಲ್ಲ; ಪ್ರೇಮದಿಂದಲೇ ಅದು ಸಾಧ್ಯ" ಎಂದನು. ಈ ಮಾತು ಕೇಳಿದ ಮೇಲೆ ಅಶೋಕನಿಗೆ ಶಾಂತಿ ಲಭಿಸಿತು.

ಅಶೋಕನು ತನ್ನ ಮಂತ್ರಿಗಳನ್ನೂ, ಸೇನಾಪತಿಗಳನ್ನೂ, ಸಾಮಂತರನ್ನೂ ಸಮಾವೇಶಗೊಳಿಸಿ, ತಾನು ಹಿಂಸೆಯನ್ನು ಶಾಶ್ವತವಾಗಿ ವಿಸರ್ಜಿಸುವೆನೆಂದು ಘೋಷಿಸಿದನು. ಅಂದಿನಿಂದ ಅಶೋಕನು ಶಾಂತಿದೂತನಾದನು. ವಿಜ್ಞಾನವನ್ನೂ, ಪ್ರೇಮವನ್ನೂ ಪ್ರಚಾರಮಾಡುವಂತೆ ಅವನು ಎಲ್ಲರಿಗೂ ಬೋಧಿಸುತ್ತಾ, ಧರ್ಮಾಶೋಕನೆಂದು ಪ್ರಸಿದ್ಧಿಗೇರಿದನು.





ದೇಶದ ಮೊತ್ತದಲ್ಲಿರುವ ಸಾಮಾಜಿಕ ಸ್ವರೂಪವನ್ನೇ ಅಶೋಕನು ಬದಲಾಯಿಸಿದನು. ಶಿಲಾಶಾಸನಗಳ ಮೂಲಕ ಧರ್ಮ ಸೂತ್ರಗಳನ್ನು ಪ್ರಚಾರ ಮಾಡಿದನು. ಅವನ ಮಗಳೂ ಮಗನೂ ಬುದ್ಧನ ಸಂದೇಶಗಳನ್ನು ಶ್ರೀಲಂಕೆಗೆ ತೆಗೆದುಕೊಂಡು ಹೋದರು. ಧರ್ಮ ಪ್ರಚಾರಕರೂ, ಭಿಕ್ಷುಗಳೂ ಪ್ರಜೆಗಳನ್ನು ಧರ್ಮ ಮಾರ್ಗದಲ್ಲಿ ನಡೆಸ ತೊಡಗಿದರು.



# ಕಚ್ಚಾಟಕ್ಕೆ ಕಟ್ಟು

ಒಂದು ಊರಿನಲ್ಲಿ ರಮಾಮಣೀ ರಾಘವರು ಹೊಸದಾಗಿ ಮದುವೆಯಾದ ಗಂಡಹೆಂಡಿರು. ಅವರು ಹೊಸ ಸಂಸಾರಕ್ಕೆ ಪ್ರಾರಂಭಿಸಿದಂದಿನಿಂದಲೂ ಅವರ ನಡುವೆ ಯಾವಾಗಲೂ ಕಚ್ಚಾಟವೇ ! ಅವರಿಬ್ಬರ ಮನೋ ಮಾರ್ಗದಲ್ಲಿ ಎಷ್ಟು ಭೇದವಿತ್ತೆಂದರೆ ಏನು ಅಡಿಗೆ ಮಾಡಬೇಕು, ಯಾವ ಗುಡಿಗೆ ಹೋಗಬೇಕು ಎಂಬಲ್ಲಿಂದ ಹಿಡಿದು ಯಾವ ಕಡೆಗೆ ತಲೆ ಹಾಕಿ ಮಲಗಬೇಕೆಂಬಲ್ಲಿಯ ವರೆಗೂ ಕಚ್ಚಾಟವೇ. ಇಬ್ಬರೊಳಗೆ ವಿರುದ್ಧಾಭಿಪ್ರಾಯವೇ.

ಯಾವುದೋ ಕಾರಣದಿಂದ ಅವರು ಬಾಡಿಗೆಗಿರುವ ಮನೆಯನ್ನು ಖಾಲೀ ಮಾಡಿ ಬೇರೊಂದು ಮನೆಯನ್ನು ನೋಡಿಕೊಳ್ಳಬೇಕಾಗಿ ಬಂತು. ರಾಘವನು ಮನೆ ಹುಡುಕಲು ತಿರುಗಿ ತಿರುಗಿ ಊರಿನ ಕೊನೆಯಲ್ಲಿ ಹಳೆಯ ಮನೆಯೊಂದನ್ನು ಬಾಡಿಗೆಗೆ ಹಿಡಿದನು. ಒಳ್ಳೆಯ ದಿನವನ್ನು ನೋಡಿ ಆ ದಂಪತಿಗಳು ಆ ಮನೆಗೆ ಹೋಗಿ ಬಿಡಾರ ಹೂಡಿದರು.

ರಾಘವನಿಗೆ ರಾಜಾಂಗದ ಕಚೇರಿಯಲ್ಲಿ ಸಣ್ಣದೊಂದು ಗುಮಾಸ್ತಗಿರಿ ಕೆಲಸ. ಒಮ್ಮೆ ಅಲ್ಲಿಂದ ಬರುವಾಗ ತರಕಾರಿಗಳನ್ನು ಕೊಂಡುಕೊಂಡು ಬಂದನು. ರಾತ್ರಿ ಊಟವಾದ ಮೇಲೆ ಮರು ದಿನದ ಅಡಿಗೆಗೆ ಏನು ಮಾಡಬೇಕೆಂಬ ಚರ್ಚೆ ನಡೆಯಿತು. ರಮಾಮಣಿ ಹೀರೇಕಾಯಿ ಪಲ್ಯ ಮಾಡುತ್ತೇನೆಂದಳು. ಸೋರೆಕಾಯಿ ಪಲ್ಯ ಚೆನ್ನಾಗಿರುತ್ತೆ. ಅದನ್ನು ಮಾಡು" ಎಂದನು ರಾಘವ.

"ನಾನು ಯತಿ ಅಂದರೆ ಪತೀ ಅನ್ನುವುದೊಂದು ಅಭ್ಯಾಸಾಂತ ಕಾಣುತ್ತೆ ನಿಮಗೆ. ಹೀಗೆ ಪ್ರತಿಯೊಂದಕ್ಕೂ ಪ್ರತಿಯಾಡುವುದೇ ಪತಿಯ ಲಕ್ಷಣವೋ? ನಾನು ಹೀರೇಕಾಯಿ ಪಲ್ಯಾನೇ ಮಾಡ್ತೇನೆ" ಎಂದಳು ರಮಾಮಣಿ.

"ನಾನು ಹೇಳಿದ್ದನ್ನು ನೀನು ಯಾವ ದಿನ ಕೇಳಿದ್ದೀ ? ಏನು ಹೇಳಿದರೂ ನಿನ್ನ ಹಟ ಬಿಡಲಾರೆಯಲ್ಲ ! ಯಾವಾಗಲೂ ನಿನ್ನದು ವಿರುದ್ಧವೇ !" ಎಂದು ಹಿಯಾಳಿಸಿದ ರಾಘವ.

"ನಿಮ್ಮದೇ ವಿರುದ್ಧ" ಎಂದು ರಮಾಮಣಿ ಹೇಳುತ್ತಿರಲು, ಯಾರೋ ಹೊರಗಿನ ಬಾಗಿಲು ತಟ್ಟುವ ಶಬ್ದ ಕೇಳಿಸಿತು. ರಾಘವನು ಹೋಗಿ ಬಾಗಿಲು ತೆರೆದನು. ಶುಕ್ಲ ಪಕ್ಷದ ಬೆಳದಿಂಗಳಿನಲ್ಲಿ

ಆರ್. ಎಸ್. ಮೂರ್ತಿ



ಜೋಳಿಗೆಯೊಂದಿಗೆ ಭಿಕ್ಷುಕನೊಬ್ಬ ಗೋಡೆಯ ಬದಿಯಲ್ಲಿ ನಿಂತಿದ್ದ. ಅವನು ರಾಘವನನ್ನು ನೋಡಿ "ನಾನಿಲ್ಲೇ ಬಿದ್ದಿದ್ದೆನಯ್ಯಾ. ನಿಮ್ಮೊಳಗಿನ ಕಚ್ಚಾಟ ಕೇಳುತ್ತಾ ಇದ್ದೆ: ಯಾಕೆ ಸುಮ್ಮನೆ ಜಗಳ? ಇಬ್ಬರಿಗೂ ಇಷ್ಟವಾದ ಎರಡರ ಪಲ್ಯವನ್ನೂ ಮಾಡಬಾರದೆ?" ಎಂದನು.

"ಬೋಳು ಸಲಹೆ! ನಿನ್ನನ್ನು ಯಾರು ಕೇಳಿದರು. ನಡಿ ನಡಿ!" ಎಂದು ರಾಘವನು ರೇಗಿದನು.

"ಇರು ಇರು ನಿನ್ನ ಡಬ್ಬಾ ಹಿಡಿ! ಈ ತಂಗಳನ್ನ ಸ್ವಲ್ಪ ಹುಳೀ ಹಾಕ್ತೇನೆ" ಎಂದು ರಮಾಮಣಿ ಆ ಭಿಕ್ಷುಕನು ತೋರಿಸಿದ ಡಬ್ಬಾದಲ್ಲಿ ಒಂದಿಷ್ಟು ಅನ್ನ ಹುಳೀ ಹಾಕಿದಳು.

ಅವನು ಸಂತೋಷದಿಂದ ಆಚೆಗೆ ಹೋದನು.

ಮಾರನೇ ದಿನ ಅಡಿಗೆ ಮಾಡುವಾಗ ರಮಾಮಣಿ ಹೀರೇಕಾಯಿ ಸೋರೆಕಾಯಿ ಎರಡರ ಪಲ್ಯಗಳನ್ನೂ ಮಾಡಿದಳು, ಆ ದಿನ ಊಟ ಮಾಡುವಾಗ ಎಂದಿನಂತೆ ಅವರಿಬ್ಬರ ನಡುವೆ ಕಚ್ಚಾಟವೇಳಲಿಲ್ಲ. ಇಬ್ಬರೂ ಮಾತಾಡದೆ ಊಟ ಮುಗಿಸಿದರು.

ಆ ರಾತ್ರಿಯಲ್ಲಿ ಇಬ್ಬರಿಗೂ ಸ್ನೇಹಿತನ ಮನೆಯಲ್ಲಿ ನಡೆಯುವ ಮದುವೆಗೆ ಹೋಗಬೇಕಾಗಿತ್ತು. ಅದನ್ನು ಕುರಿತು ಮಾತಾಡಿಕೊಳ್ಳುತ್ತ, "ನೀನು ನೀಲ ಸೀರೆ ಉಟ್ಟುಕೋ, ಚೆನ್ನಾಗಿರುತ್ತದೆ" ಎಂದನು ರಾಘವ.

"ಊಹುಂ, ಕೆಂಪು ಬಣ್ಣದ್ದೇ ಉಟ್ಟುಕೊಳ್ಳುತ್ತೇನೆ" ಎಂದಳು ರಮಾಮಣಿ. ಆ ವಿಷಯದಲ್ಲಿ ಇಬ್ಬರೊಳಗೆ ಕಚ್ಚಾಟ ಶುರುವಾಯಿತು. ಆಗ ಹೊರಬಾಗಿಲು ತಟ್ಟುವ ಶಬ್ದ ಕೇಳಿಸಿತು. ಯಾರು ಬಂದರೋ ಎಂದುಕೊಂಡು ರಮಾಮಣಿ ಹೋಗಿ ಬಾಗಿಲು ತೆರೆದಳು. ನಿನ್ನೆ ರಾತ್ರಿ ಕಾಣಿಸಿದ ಅದೇ ಭಿಕ್ಷುಕ!

"ಯಾಕೆ ಅರ್ಥವಿಲ್ಲದೆ ಕಚ್ಚಾಡಿಕೊಳ್ತೀರಯ್ಯಾ? ಹೇಗೂ ನಾಳೆ ಪೂರಾ ಮದುವೆ ಮನೇಲೇ ಇರುವಿರಿ. ಒಂದು ಹೊತ್ತು ಕೆಂಪು ಸೀರೇನೂ, ಇನ್ನೊಂದು ಹೊತ್ತು ನೀಲ ಸೀರೇನೂ ಉಟ್ಟರಾಯಿತಲ್ಲಾ! ಇದಕ್ಕೇಕೆ ಇಷ್ಟು ಜಗಳ ಹೇಳಿ?" ಎಂದನು.

"ನೀನಾರೋ ನಡುವೆ? ಪಾನಕದಲ್ಲಿ ಕಡ್ಡೀ ಬಂದ ಹಾಗೆ! ನಮ್ಮ ಸಂಗತಿ ನೋಡಿಕೊಳ್ಳಲು ನಮಗೆ ಗೊತ್ತು. ಹೋಗು ಹೋಗು!" ಎಂದು ಕೂಗಿ ಹೇಳಿದಳು ರಮಾಮಣಿ.

"ಇರು ಇರೋ" ಎಂದು ರಾಘವನು ತನ್ನ ಜೇಬಿನಿಂದ ಚಿಲ್ಲರೆ ದುಡ್ಡು ತೆಗೆದು ಅವನ ಡಬ್ಬಾದಲ್ಲಿ ಹಾಕಿದನು, "ಸಂತೋಷವಾಗಿರಿ" ಎಂದು ಹರಸಿ ಹೊರಟು ಹೋದ ಆ ಭಿಕ್ಷುಕ.

ಮಾರನೇ ದಿನ ರಾತ್ರಿ ಅವರು ಮದುವೇ ಮನೆಯಿಂದ ಹಿಂದಿರುಗಿದರು. ಹೊರಗಿನ ಜಗಲಿಯ ಮೇಲೆ ಅದೇ ಭಿಕ್ಷುಕ ನಿದ್ದೆ ಮಾಡಿಕೊಂಡಿದ್ದ. ಅವರಿಬ್ಬರೂ ಮದುವೆ ಮನೆಯಲ್ಲಿಯೋ ಊಟ

Kannada Jan F—4 B P. 40

ಮಾಡಿ ಬಂದಿದ್ದರು. ಅಂತಲೇ ಸ್ವಲ್ಪ ನೀರು ಕುಡಿದು ಇಬ್ಬರೂ ಮಲಗಿದರು.

ಮತ್ತೇನೋ ಅವರೊಳಗೆ ವಾದ ವಿವಾದ! "ಹೆತ್ತರೆ ಹೆಣ್ಣೇ ಹೆರಬೇಕು. ಹೆಣ್ಣಾದರೆ ಲಕ್ಷಣ ವಾಗಿ ಮದುವೆ ಮಾಡಿ, ಪುಣ್ಯ ಸಂಪಾದಿಸಿಕೊಳ್ಳ ಬಹುದು. ಒಂದು ಕನ್ಯಾದಾನ ಮಾಡಿದರೆ ಕೋಟಿ ರೂಪಾಯಿ ದಾನ ಮಾಡಿದ ಪುಣ್ಯಾ ಅಂತ ಶಾಸ್ತ್ರ ಗಳು ಹೇಳಿದ್ದಾರೆ" ಎಂದಳು ರಮಾಮಣಿ.

"ಛೀ ಛೀ! ನಿನ್ನದು ಹಾಳು ಆಶೆ! ತಥಾಸ್ತು ದೇವತೆಗಳು ತಥಾಸ್ತು ಅಂದುಗಿಂದಾರು! ಹೆಣ್ಣು ಮಗು ಬೇಡವೇ ಬೇಡಪ್ಪಾ! ಅದಕ್ಕೆ ಗಂಡನನ್ನು ಹುಡುಕಬೇಕು! ಕೇಳುವಷ್ಟು ವರದಕ್ಷಿಣೆ ಸುರೀಬೇಕು! ಅದರ ಮೇಲಷ್ಟು ಖರ್ಚುಮಾಡಿ ಮದುವೆ ಮಾಡಿ ಕೊಡಬೇಕು. ಅಷ್ಟೂ ಮಾಡಿದ ಮೇಲೆ ಅವಳು ನಮಗಿಲ್ಲದೆಯೇ ಹೋಗುತ್ತಾಳೆ. ಗಂಡುಮಗ ನಾದರೆ ನಮಗೆ ಕೈ ಕಾಲು ಬೀಳುವ ಪ್ರಾಯದಲ್ಲಿ ಆಧಾರವಾಗಿರುತ್ತಾನೆ ಗೊತ್ತಾ" ಎಂದ ರಾಘವ.

ಅವಳು ಅದನ್ನು ಪ್ರತಿಭಟಿಸಿದಳು. ಶುರು ವಾಯಿತು ಅವರೊಳಗೆ ತೀರದ ಕಚ್ಚಾಟ. ಆಗ ಮತ್ತೆ ಹೊರಬಾಗಿಲು ತಟ್ಟಿದ ಶಬ್ದ! "ಆ ಪೀಡೆ ಹಿಡಿದ ಭಿಕ್ಷುಕಾಂತ ಕಾಣುತ್ತೆ" ಎಂದು ರಾಘವನು ಬಾಗಿಲು ತೆರೆದು, "ಏನಪ್ಪಾ ನೀನು? ಮತ್ತೆ ನಮಗೆ ಆಲೋಚನೆ ಹೇಳಲು ಬಂದೆಯಾ?" ಎಂದು ಹೇಳುತ್ತಾ ನಾಲಗೆ ಕಡಿದುಕೊಂಡನು. ಏಕೆಂದರೆ ಬಂದವನು ಭಿಕ್ಷುಕನಲ್ಲ. ಕಚೇರಿಯಲ್ಲಿ ಅವನೊಂದಿಗೆ ಕೆಲಸ ಮಾಡುವ ವೆಂಕಟಗಿರಿ.

"ನನ್ನನ್ನು ನೋಡಿ ಯಾರೆಂದುಕೊಂಡೆ ರಾಘವಾ? ಇವತ್ತು ನೀನು ಕಚೇರಿಗೆ ಬರಲಿಲ್ಲ ವಷ್ಟೆ? ನಿನ್ನಿಂದ ನಾನು ಕೈಗಡ ತಕ್ಕೊಂಡ ಹಣ ಕೊಟ್ಟುಬಿಡುವಾ ಅಂತ ಬಂದೆ. ರಾತ್ರಿ ಸ್ವಲ್ಪ ತಡ ವಾಯಿತು. ಮನೆಗೆ ಒಯ್ದುಬಿಟ್ಟರೆ ಖರ್ಚಾಗಿ ಬಿಡುತ್ತದಲ್ಲಾ! ತೆಗೆದುಕೋ" ಎಂದು ವೆಂಕಟಗಿರಿ ರಾಘವನಿಗೆ ಹಣವನ್ನು ಕೊಟ್ಟು ಹೊರಟು ಹೋದನು.



ರಾಘವನು ಬಾಗಿಲು ಹಾಕಬೇಕೆಂದಿರುವಾಗ ಎಲ್ಲಿಯೋ ಇದ್ದ ಭಿಕ್ಷುಕನು ಇದಿರಿಗೆ ಬಂದು, "ಅಯ್ಯಾ ನನ್ನದೊಂದು ಸಣ್ಣ ಮಾತು! ನೀವಿಬ್ಬರೂ ಹೆಣ್ಣುಬೇಕು, ಗಂಡುಬೇಕು ಅಂತ ಜಗಳ ಮಾಡಿಕೊಂಡಿದ್ದಿರಲ್ಲ ? ಈಗ ಪಕ್ಕದ ಬೀದಿಯಲ್ಲಿರುವ ಮೇದರ ಮುಕ್ಕಪ್ಪನ ಹೆಂಡತಿಗೂ, ಬಳೆಗಾರ ಬಾಡಪ್ಪನ ಹೆಂಡತಿಗೂ ಹೆರಿಗೇ ನೋವು ಶುರುವಾಗಿದೆ. ಅವರಲ್ಲಿ ಯಾರಿಗೆ ಏನು ಮಗು ಹುಟ್ಟುತ್ತೇ ಅಂತ ನೀವು ಸರಿಯಾಗಿ ಹೇಳಿದರೆ ನಿಮ್ಮ ಕಚ್ಚಾಟ ನಿಲ್ಲಿಸಿ ಬಿಡುತ್ತೇನೆ. ಭಿಕ್ಷುಕನ ಮಾತೂ ಅಂತ ತಾತ್ಸಾರ ಮಾಡಬೇಡಿ !" ಎಂದನು.

ಆ ಮಾತು ಕೇಳಿ ರಮಾಮಣಿ ಮುಂದೆ ಬಂದು "ಮುಕ್ಕಪ್ಪನ ಹೆಂಡತಿಗೆ ಹೆಣ್ಣೇ ಹುಟ್ಟುತ್ತೆ" ಎಂದಳು. ಕೂಡಲೇ ಬಾಡಪ್ಪನ ಹೆಂಡತಿಗೆ ಗಂಡು ಹುಟ್ಟುತ್ತದೆಂದನು ರಾಘವ. ಆ ದಿನ ರಾತ್ರಿ ರಾಘವನು ಎಚ್ಚರವಾಗಿದ್ದು, ಆ ಇಬ್ಬರ ಹೆರಿಗೇ ಸಮಾಚಾರವನ್ನೇ ಕಾದಿದ್ದನು. ಮುಕ್ಕಪ್ಪನಿಗೆ ಗಂಡು ಮಗುವೂ ಬಾಡಪ್ಪನಿಗೆ ಹೆಣ್ಣು ಮಗುವೂ ಹುಟ್ಟಿರುವ ಸಮಾಚಾರ ಬಂದಿತು.

ಆಗ ಭಿಕ್ಷುಕ ನಗುತ್ತಾ, "ನೋಡಿದಿರಾ ? ನೀವಿಬ್ಬರೂ ಅಂದುಕೊಂಡ ಹಾಗೆ ನಡೆಯಲೇ ಇಲ್ಲ. ಯಾರಿಗೆ ಯಾವುದು ಹುಟ್ಟುವುದೆಂಬುದು ಯಾರಿಗೂ ತಿಳಿಯದು. ಅದೇ ಸೃಷ್ಟಿಯ ಮಾಯೆ ! ಸೃಷ್ಟಿಯಲ್ಲಿ ಹೆಣ್ಣು ಗಂಡು ಎರಡೂ ಸಮಾನವೇ. ಅಂದರೆ ನೀವಿಬ್ಬರೂ ಸಮಾನರೇ ಅಂತಾಯಿತು. ಆದುದರಿಂದ ಇನ್ನು ಜಗಳ ಮಾಡಿಕೊಳ್ಳಲಾರಿರಷ್ಟೆ? ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡು ಒಬ್ಬರ ಸಂತೋಷಕ್ಕಾಗಿ ಒಬ್ಬರು ಪ್ರಯತ್ನಿಸಿರಿ. ಆಗ ಇಬ್ಬರಿಗೂ ಸಮಾನ ಸುಖಸಂತೋಷಗಳಿರುತ್ತವೆ. ನಾನು ಬದುಕಿದ್ದಾಗ ಎಷ್ಟೋ ಸಂಸಾರಗಳನ್ನು ಸರಿಪಡಿಸಿದ್ದೇನೆ. ಅದೇ ಬಯಕೆ ಇನ್ನೂ ನನ್ನಲ್ಲಿರುವುದರಿಂದಲೇ ಈ ರೂಪದಲ್ಲಿದ್ದೇನೆ !" ಎಂದನು.

ಅವನ ಮಾತು ಕೇಳಿ ಗಂಡ ಹೆಂಡಿರ ಶರೀರಗಳು ಭಯದಿಂದ ಗದಗದಿಸಿದುವು. ಉಂಗುಷ್ಠದಿಂದ ನೆತ್ತಿಯವರೆಗೆ ಜುಂ ಎಂದಿತು. ಆ ಬವಳಿ ಇಳಿದು ಹೋದ ಮೇಲೆ ಭಿಕ್ಷುಕನು ಅಲ್ಲೆಲ್ಲಿಯೂ ಕಾಣಲಿಲ್ಲ.

ಇಬ್ಬರಿಗೂ ಅಂಟಿಕೊಂಡ ಭಯ ಬಿಡಲೇ ಇಲ್ಲ. ಊರ ಹೊರಗಿನ ಒಂಟಿ ಮನೆಯದು ! ಸುತ್ತಲೂ ಮರ ಮಟ್ಟುಗಳು! ಬೇರೆ ಮನೆ ಬದಲಾಯಿಸಲಿಕ್ಕೂ ಸಾಧ್ಯವಿಲ್ಲ, ಅಂತಲೇ ಅವರು ದೆವ್ವಕ್ಕೆ ಹೆದರಿ ಕಚ್ಚಾಡಿಕೊಳ್ಳುವುದನ್ನು ಬಿಟ್ಟರು. ಕಚ್ಚಾಟವಿಲ್ಲದ್ದರಿಂದ ಆ ದೆವ್ವ ಬಾಗಿಲು ತಟ್ಟಲೂ ಇಲ್ಲ. ಕ್ರಮೇಣ ಇಬ್ಬರಿಗೂ ಧೈರ್ಯ ಬಂದಿತು. ಆನಂದವು ಹರಿಯಲು ಪ್ರಾರಂಭವಾಯಿತು. ಕಚ್ಚಾಟನಿಂತೇ ಹೋಗಿ, ನಗುವಿನ ಕಲಕಲ ಕೇಳಿಸ ತೊಡಗಿತು.



# ಮನುಷ್ಯನ ಕರ್ತವ್ಯ

**ಒ**ಬ್ಬ ರಾಜನ ಹತ್ತಿರ ರವಿವರ್ಮನೆಂಬ ಯುವಕನು ಬಂದು, ತನಗೊಂದು ಕೆಲಸ ಕೊಡಿಸುವಂತೆ ಬೇಡಿಕೊಂಡನು. ಹುಡುಗನು ಒಳ್ಳೆಯ ಗುಣದವನಂತೆ ಕಾಣುವುದರಿಂದ ರಾಜನು ಮಂತ್ರಿಯನ್ನು ಕರೆದು ಅವನಿಗೆ ತಕ್ಕುದಾದ ಒಂದು ಕೆಲಸಕೊಡುವಂತೆ ಅಪ್ಪಣೆ ಮಾಡಿದನು. ಮಂತ್ರಿ ಅವನಿಗೆ ತನ್ನ ಕಾರ್ಯಾಲಯದಲ್ಲಿ ಒಂದು ಕೆಲಸವನ್ನು ಏರ್ಪಡಿಸಿಕೊಟ್ಟನು.

ರವಿವರ್ಮನಿಗೆ ಒಪ್ಪಿಸಲ್ಪಟ್ಟ ಕೆಲಸವು ಚುರುಕಾಗಿ ಸಾಗದೆ, ದಿನಕಳೆದಹಾಗೆ ಕೆಲಸ ಅಲ್ಲೇ ಉಳಿದು ಏರುತ್ತಾ ಹೋಗುತ್ತಿತ್ತು.

ಅದನ್ನು ಗಮನಿಸಿ ಮಂತ್ರಿ ಈ ಆಲಸ್ಯಕ್ಕೆ ಕಾರಣವೇನೆಂದು ನೋಡುತ್ತಾಬರಲು, ರವಿವರ್ಮನು ದೈವ ಭಕ್ತನಾಗಿದ್ದು ರಾತ್ರೀ ಹಗಲೂ ದೇವಾಲಯದಲ್ಲೇ ಹೆಚ್ಚಿನ ಕಾಲವನ್ನು ಕಳೆಯುವನೆಂದು ಗೊತ್ತಾಯಿತು. ಮಂತ್ರಿ ಅವನನ್ನು ಕರೆದು, ಕೆಲಸದ ಮೇಲೆ ಲಕ್ಷ್ಯವಿಲ್ಲದಿರುವುದಕ್ಕೆ ಬೈದನು.

"ಅಯ್ಯಾ, ನನಗೆ ಜನ್ಮವನ್ನು ಪ್ರಸಾದಿಸಿದ ದೇವರ ಕೃತಜ್ಞತೆಯನ್ನು ಸ್ಮರಿಸಲು ರಾತ್ರೀ ಹಗಲೂ ಸಹ ಸಾಕಾಗುವುದಿಲ್ಲ." ಎಂದನು ರವಿವರ್ಮ.

"ಹಾಗೇನು? ನಿನಗೆ ಕೆಲಸಕೊಟ್ಟ ಮಹಾರಾಜರಿಗೆ ಕೂಡಾ ಕೃತಜ್ಞತೆ ತಿಳಿಸುತ್ತಾ ಇರು!" ಎಂದನು ಮಂತ್ರಿ.

ಇದೂ ಅಗತ್ಯವೆಂದು ತೋರಿತು ರವಿವರ್ಮನಿಗೆ. ಅವನು ದಿನಾ ರಾಜನ ದರ್ಶನ ಮಾಡಿ, ಕೆಲಸ ಕೊಡಿಸಿದುದಕ್ಕೆ ಕೃತಜ್ಞತೆ ಹೇಳತೊಡಗಿದನು. ರಾಜನಿಗೆ ವಿಚಿತ್ರವೆನಿಸಿತು. ನಾಲ್ಕು ದಿನಗಳವರೆಗೆ ನೋಡಿದ ರಾಜನು, ಕೋಪಗೊಂಡು ಅವನನ್ನು ಉದ್ಯೋಗದಿಂದ ತೊಲಗಿಸಿಬಿಟ್ಟನು.

ರವಿವರ್ಮನು ಮಂತ್ರಿಯ ಬಳಿಗೆಬಂದು, "ನೀವು ಹೇಳಿದ ಹಾಗೆ ಮಾಡಿದರೆ, ನನ್ನ ಕೆಲಸವೇ ಹೋಯಿತಲ್ಲ!" ಎಂದನು.

"ಹೋಗದೇ ಇದ್ದೀತೆ? ಮಹಾರಾಜರು ನಿನಗೆ ಕೆಲಸ ಕೊಡಿಸಿದ್ದು ಕೆಲಸಮಾಡಲಿಕ್ಕೇ ಹೊರತು ದಿನಾ ನಿನ್ನ ಕೃತಜ್ಞತೆ ಸ್ವೀಕರಿಸಲಿಕ್ಕೆ ಅಲ್ಲ. ದೇವರು ನಿನಗೆ ಜನ್ಮಕೊಟ್ಟದ್ದು ಕರ್ತವ್ಯ ನೆರವೇರಿಸಲಿಕ್ಕೆ ಹೊರತು ಕರ್ತವ್ಯ ಧ್ಯಾನಿಸಿ ಕೂಡಲಿಕ್ಕಲ್ಲ. ನೀನು ಹೆಚ್ಚು ವೇಳೆಯನ್ನು ರಾಜರನ್ನೂ, ದೇವರನ್ನೂ ಹೊಗಳಲಿಕ್ಕೆ ವ್ಯಯ ಮಾಡಿದರೆ ಕೆಲಸ ಹೋಗದೆ ಮತ್ತೇನಾಗುತ್ತೆ?" ಎಂದು ಮಂತ್ರಿ ಚೆನ್ನಾಗಿ ಬುದ್ಧಿ ಹೇಳಿ, ಮತ್ತೆ ಅವನಿಗೆ ಕೆಲಸಕೊಟ್ಟನು. ಈ ಸಾರಿ ರವಿವರ್ಮ ತನ್ನ ಕೆಲಸ ಸರಿಯಾಗಿ ಮಾಡಿ ಮುಂದಕ್ಕೆ ಬಂದನು.





# ನೆರೆಮನೆ ಸರಸಮ್ಮ

ಅನೇಕ ವರ್ಷಗಳ ಹಿಂದೆ ಚಂಪಕದೇಶದ ಸರಹದ್ದಿನಲ್ಲಿದ್ದ ಶಂಬವರವೆಂಬ ಗ್ರಾಮದಲ್ಲಿ ರಾಮಣ್ಣನೆಂಬೊಬ್ಬ ಆಸಾಮಿ ವಾಸವಾಗಿದ್ದ. ಆವನಿಗೆ ಸುಬ್ಬಣ್ಣನೆಂಬ ತಮ್ಮನೂ, ಗೌರಿ ಎಂಬ ತಂಗಿಯೂ ಇದ್ದರು. ರಾಮಣ್ಣನ ಹೆಂಡತಿ ಲಕ್ಷ್ಮಿ ಸುಬ್ಬಣ್ಣನನ್ನೂ ಗೌರಿಯನ್ನೂ ತುಂಬಾ ಅಭಿಮಾನದಿಂದ ನೋಡಿಕೊಳ್ಳುತ್ತಿದ್ದಳು. ಒಟ್ಟಿನಲ್ಲಿ ಆ ಕುಟುಂಬವು ಆ ಗ್ರಾಮಕ್ಕೇ ಆದರ್ಶಪ್ರಾಯವಾಗಿದ್ದಿತೆಂದು ಹೇಳಬಹುದು.

ಒಂದು ಸಾರಿ ಚಂಪಕದೇಶಕ್ಕೆ ಪಕ್ಕದ ದೇಶದ ಮೇಲೆ ಯುದ್ಧ ಮಾಡಬೇಕಾದ ಅಗತ್ಯ ಬಂದಿತು. ಶತ್ರು ಸೈನಿಕರು ಸರಹದ್ದು ಪ್ರಾಂತದಲ್ಲಿದ್ದ ಶಂಬವರದ ಮೇಲೆ ಬಂದು ಬೀಳಲಿದ್ದಾರೆಂದು ಜನರು ಮಾತಾಡಲು ತೊಡಗಿದರು. ಗ್ರಾಮಸ್ಥರು ಹೆದರಿ ಊರುಬಿಟ್ಟು ದೂರ ದೂರ ಓಡಿ ಹೋಗಲು ತೊಡಗಿದರು. ಎಲ್ಲರೊಂದಿಗೆ ರಾಮಣ್ಣ ಕೂಡಾ ತನ್ನವರೊಂದಿಗೆ ದೂರದಲ್ಲಿದ್ದ ಮತ್ತೊಂದು ಗ್ರಾಮಕ್ಕೆ ವಲಸೆಹೋದನು. ಶಂಬವರ ಮೊದಲಾದ ಗ್ರಾಮಗಳನ್ನು ಶತ್ರುಗಳು ಆಕ್ರಮಿಸಿಕೊಂಡರು.

ರಾಮಣ್ಣ ಹೊಸ ಊರಿನಲ್ಲಿ ಹೊಸ ಜೀವನವನು ಪ್ರಾರಂಭಿಸಬೇಕಾಯಿತು. ಅವನ ತಮ್ಮ ಸುಬ್ಬಣ್ಣ ಓದಿನಲ್ಲಿ ಹಿಂದೆಯಾಗಿ ಅಷ್ಟೇನೂ ಕಲಿತವನಲ್ಲ. ಆದರೆ ರಾಮಣ್ಣ ಚೆನ್ನಾಗಿ ಓದಿಕೊಂಡಿದ್ದನು. ಲಕ್ಷ್ಮಿಗೆ ಒಳ್ಳೆಯ ಕಂಠವೂ, ಸಂಗೀತ ಜ್ಞಾನವೂ ಇದ್ದಿತು. ಅಲ್ಲಿ ಗಂಡ ಹೆಂಡಿರು ಕೂಡಿ ಚಿಕ್ಕದೊಂದು ಗುರುಕುಲವನ್ನು ಸ್ಥಾಪಿಸಿಕೊಂಡರು. ಗೌರಿ ಮನೆಗೆಲಸ ನೋಡಿಕೊಳ್ಳುವುದರಲ್ಲಿ ಅಣ್ಣನಿಗೂ ಅತ್ತಿಗೆಗೂ ತುಂಬಾ ಸಹಾಯಕಳಾಗಿದ್ದಳು. ಸುಬ್ಬಣ್ಣ ಸಮೀಪದಲ್ಲಿದ್ದ ಅರಣ್ಯದಿಂದ ಕಟ್ಟಿಗೆಗಳನ್ನೂ, ಉಪಯೋಗಬೀಳುವ ಇತರ ವಸ್ತುಗಳನ್ನೂ ತರುತ್ತಿದ್ದನು. ಆದುದರಿಂದ ಹೆಚ್ಚಿನ ಕಷ್ಟವೇನಿಲ್ಲದೆ ಒಂದು ವರ್ಷಕಾಲದಲ್ಲಿ ರಾಮಣ್ಣ ಸ್ವಲ್ಪ ಹಣವನ್ನು ಉಳಿತಾಯ ಮಾಡಿ, ಎರಡು ಏಕರೆ ಭೂಮಿಯನ್ನು ಕೊಂಡನು. ಸುಬ್ಬಣ್ಣ ಅರಣ್ಯಕ್ಕೆ ಹೋಗುವುದನ್ನು ಬಿಟ್ಟು ವ್ಯವಸಾಯವನ್ನು ಪ್ರಾರಂಭಿಸಿದನು.

ಹೀಗೆ ಸ್ವಂತ ಊರಿನಿಂದ ಬೇರೆ ಊರಿಗೆ ಬಂದರೂ ರಾಮಣ್ಣನ ಪರಿಸ್ಥಿತಿ ಚೆನ್ನಾಗುತ್ತಾ ಬಂತು. ತಾನಿರುವ ಬಾಡಿಗೆಯ ಮನೆಯನ್ನು ಬಿಟ್ಟು ಸ್ವಂತ

ಜಿ. ರಾಜಲಕ್ಷ್ಮಿ

ಮನೆಯೊಂದು ಕೊಂಡುಕೊಳ್ಳಬೇಕೆಂದು ಮಾಡಿದನು. ಈ ಆಲೋಚನೆ ಬರಲು ಮುಖ್ಯ ಕಾರಣವೇನೆಂದರೆ, ಅವನು ಆ ಗ್ರಾಮಕ್ಕೆ ಬಂದಂದಿನಿಂದಲೂ ಒಂದು ಮನೆ ಮಾರಾಟಕ್ಕೆ ಕಾದುಕೊಂಡಿತ್ತು. ಬೆಲೆ ಸ್ವಲ್ಪ ಕಡಿಮೆಯೆಂದೂ ಗೊತ್ತಾಗಿತ್ತು. ಆದರೂ ಅದನ್ನು ಕೊಂಡುಕೊಳ್ಳಲು ಯಾರೂ ಮುಂದೆ ಬರಲಿಲ್ಲ ವೆಂಬುದೇ ಆಶ್ಚರ್ಯದ ಸಂಗತಿ. ರಾಮಣ್ಣನು ಆ ಮನೆಯನ್ನು ತಾನು ಕೊಂಡುಕೊಳ್ಳುವ ಮಾತು ತೆಗೆದುದನ್ನು ನೋಡಿ ಅವನ ಮಿತ್ರನೊಬ್ಬ, "ಅಂತಹ ಬುದ್ಧಿಗೇಡಿ ಕೆಲಸ ಮಾಡಬೇಡ. ಆದರ ನೆರೆಯನೆಯಲ್ಲಿರುವ ಸರಸಮ್ಮ ಎಂಬವಳು ತುಂಬ ಅಪಾಯದ ಹೆಂಗುಸು" ಎಂದು ಶ್ರೇಯೋಭಿಲಾಷಿ ಯಂತೆ ಹೇಳಿದನು.

ರಾಮಣ್ಣನಿಗೆ ವಿಚಿತ್ರವೆನಿಸಿತು. ಕೇವಲ ಒಬ್ಬಳು ಹೆಂಗುಸಿಗೆ ಹೆದರಿ ಅಗ್ಗದಲ್ಲಿ ಬರುವ ಮನೆಯನ್ನು ಬಿಟ್ಟುಬಿಡುವುದೆಂದರೇನು ? ಹಣ ಸೇರಿದ ಕೂಡಲೇ ಅವನು ಆ ಮನೆಯನ್ನು ಕೊಂಡುಕೊಂಡು, ಒಳ್ಳೆಯ ದಿನ ನೋಡಿ, ಶಾಸ್ತ್ರೀಯವಾಗಿ ಗಣಹೋಮಾದಿ ಗಳನ್ನು ಆಚರಿಸಿ ಗೃಹಪ್ರವೇಶ ಮಾಡಿದನು. ಗೃಹ ಪ್ರವೇಶಕ್ಕೆ ನೆರೆಮನೆಯ ಸರಸಮ್ಮ ಕೂಡಾ ಬಂದಿ ದ್ದಳು. ಅವಳು ಹೆಸರಿಗೆ ತಕ್ಕಂತೆ ಒಳ್ಳೆಯ ಸರಸಿ ಯಾಗಿಯೇ ಕಂಡಳು. ಬಹಳ ಕಾಲದ ಮೇಲೆ ಪಕ್ಕದ ಮನೆಗೆ ಒಳ್ಳೆಯ ಕುಟುಂಬವು ಬಂದುದಕ್ಕೆ ಅವಳು ತುಂಬಾ ಸಂತೋಷ ವ್ಯಕ್ತಪಡಿಸಿದಳು.

ಸರಸಮ್ಮನ ಮನೆಯಲ್ಲಿ ಅವಳೂ ಅವಳಗಂಡನೂ ಇದ್ದರು. ಅವರಿಗೆ ಮಕ್ಕಳಾಗಿರಲಿಲ್ಲ. ಬಂಧುಬಳಗದ ವರಿದ್ದರೂ, ಸರಸಮ್ಮನಿಗೆ ಅವರಾರೂ ಹಿಡಿಸುವು ದಿಲ್ಲವಂತೆ. ಸರಸಮ್ಮ ಲಕ್ಷ್ಮಿಯೊಂದಿಗೆ ಸ್ನೇಹ ಮಾಡಿ ಕೊಂಡಳು. ಸ್ವಲ್ಪ ಕಾಲ ಚೆನ್ನಾಗಿಯೇ ನಡೆಯಿತು.

ಲಕ್ಷ್ಮಿ ತನ್ನ ಮನೆಗೆ ಬರುವ ಮಕ್ಕಳಿಗೆ ಸಂಗೀತ ಕಲಿಸಲು ಪ್ರಯತ್ನಿಸುತ್ತಿದ್ದಳು. ಕೆಲವು ಮಕ್ಕಳು



ಸಂಗೀತದ ಅಭಿರುಚಿಯಲ್ಲಿ ಮನಸ್ಸು ಕೊಟ್ಟು ಕಲಿಯುತ್ತಿದ್ದರು. ರಾಮಣ್ಣನು ಮನೆಯ ಹೊರಗಿನ ವಠಾರದಲ್ಲಿರುವ ದೊಡ್ಡ ಮರದ ಕೆಳಗೆ ಹುಡುಗರಿಗೆ ಪಾಠ ಹೇಳಿ ಕೊಡುತ್ತಿದ್ದನು. ಗೌರಿ ಮನೆಗೆಲಸಗ ಳೊಂದಿಗೆ, ಅಡಿಗೆಯನ್ನೂ ಮಾಡುತ್ತಿದ್ದಳು. ಸುಬ್ಬಣ್ಣ ಬೆಳಿಗ್ಗೆ ಎದ್ದು ಹೊಲಕ್ಕೆ ಹೋಗಿ, ಮತ್ತೆ ರಾತ್ರಿಗಷ್ಟೇ ಮನೆಗೆ ಬರುತ್ತಿದ್ದನು.

ಸರಸಮ್ಮ ಗೌರಿಯನ್ನು ದಿನಾ ಸ್ವಲ್ಪ ಹೊತ್ತು ತನ್ನ ಮನೆಗೆ ಕರೆದು ಅದೂ ಇದೂ ಮಾತಾಡು ತ್ತಿದ್ದಳು. ಚಿಕ್ಕ ವಯಸ್ಸಿನಲ್ಲಿಯೇ ಗೌರಿ ತುಂಬಾ ಕೆಲಸ ಮಾಡುವುದಕ್ಕೆ ಕನಿಕರ ತೋರಿಸುತ್ತ, "ಆದರೂ ಅಷ್ಟೂ ಕೆಲಸ ನೀನೊಬ್ಬಳೇ ಮಾಡುವುದೆಂದ ರೇನಮ್ಮ ! ನಿನ್ನ ಅತ್ತಿಗೆಗೆ ಕೂತುಕೊಂಡು ರಾಗ ಎಳೆಯುವುದರ ಹೊರತು ಬೇರೆ ಕೆಲಸವೇನೂ ಗೊತ್ತಿಲ್ಲವೇ ?" ಎಂದು ಹೇಳುತ್ತಿದ್ದಳು. "ಹಾಗನ್ನಬೇಡಿ. ನನ್ನ ಅತ್ತಿಗೆ ದೇವತೆಯಂಥವರು.

ಮುಂದಿನ ವರ್ಷ ನನಗೆ ಮದುವೆ ಮಾಡಬೇಕಂತ ಇದ್ದಾರೆ. ಅತ್ತಿಗೆ ನನಗೇನೂ ಕಡಿಮೆ ಮಾಡಿಲ್ಲ. ಬೇಕಾದ್ದೆಲ್ಲ ಮಾಡಿಸಿದ್ದಾರೆ. ನನ್ನನ್ನು ತುಂಬಾ ಅಭಿಮಾನದಿಂದ ಅಕ್ಕರೆಯಿಂದ ನೋಡಿಕೊಳ್ಳುತ್ತಾರೆ" ಎಂದು ಗೌರಿ ವಿನಯದಿಂದ ಉತ್ತರ ಕೊಡುತ್ತಿದ್ದಳು.

"ಹೌದೌದು. ನಿನ್ನಂಥ ಪಾಪದವಳೊಬ್ಬಳು ಸಿಗಬೇಕಾದರೆ ಎಷ್ಟು ದೇವರಿಗೆ ಹರಕೆ ಹೊರಬೇಕು. ಎಷ್ಟು ಹಣ ಕೊಟ್ಟರೂ ನಿನ್ನ ಹಾಗೆ ಕೆಲಸ ಮಾಡುವ ಹುಡುಗಿ ಸಿಗಲಿಕ್ಕಿಲ್ಲ. ಅದೃಷ್ಟ ! ಪುಣ್ಯ ಮಾಡಿದವಳು ನಿನ್ನ ಅತ್ತಿಗೆ ! ಆದರೂ ಇಷ್ಟೊಂದು ಅಮಾಯಕಳಾಗಿರುವ ನೀನು ಮುಂದೆ ಹೇಗೆ ತಾನೆ ಬದುಕುವಿಯೋ ಏನೋ !" ಎಂದು ಸರಸಮ್ಮ ತುಂಬ ಮನ ಕರಗಿ ಹೇಳುವಳು.

ಈ ಬಗೆಯ ಮಾತುಗಳು ಮೊದಮೊದಲು ಗೌರಿಯ ಮೇಲೆ ಯಾವ ಪರಿಣಾಮವನ್ನೂ ಮಾಡದೇ ಹೋದರೂ, ಕ್ರಮವಾಗಿ ಅವಳಲ್ಲಿ ಅನುಮಾನವು ತಲೆಯೆತ್ತ ತೊಡಗಿತು. ತಾನು ದಡ್ಡಿಯಾದುದರಿಂದಲೇ ತನ್ನ ಅತ್ತಿಗೆ ತನ್ನಿಂದ ಇಷ್ಟೆಲ್ಲಾ ಚಾಕರಿ ಮಾಡಿಸಿಕೊಂಡು ಸುಖವಾಗಿ ಕುಳಿತು ಉಣ್ಣುತ್ತಿದ್ದಾಳೆ, ಇಂತಹ ಅನುಮಾನದ ಹುಳುವಿನಿಂದಾಗಿ ಗೌರಿಗೆ ತನ್ನ ಅತ್ತಿಗೆಯೊಬ್ಬಳು ದುಷ್ಟೆಯಾಗಿ ಕಾಣುತ್ತಿದ್ದಿತು. ಸರಸಮ್ಮ ಸುಬ್ಬಣ್ಣನ ಮೇಲೆ ಕೂಡಾ ಅದೇ ರೀತಿಯಾಗಿ ಕರುಣೆ ತೋರುತ್ತ ಬಂದಳು.

"ಎಷ್ಟಾದರೂ ನಿನ್ನ ದುಡಿತಕ್ಕೆ ಈಡು ಜೋಡಿಲ್ಲ. ನಿನ್ನನ್ನು ನೋಡಿದರೆ ರಾಮಣ್ಣನ ತಮ್ಮನೆಂದು ಯಾರೂ ಹೇಳಲಾರರು, ಅವನು ಕೂಲಿ ಕೆಲಸದ ಆಳು ಅಂದುಕೊಳ್ಳುತ್ತಾರೆ" ಎಂದಳು ಸರಸಮ್ಮ ಸುಬ್ಬಣ್ಣನೊಂದಿಗೆ.

"ಮತ್ತೇನು ಮಾಡಲಿ ಸರಸಮ್ಮನೋರೇ ? ನನಗೆ ಓದು ಬರೆಹ ಅಂಟಲಿಲ್ಲ. ಸುಮ್ಮನೆ ಕೂಡಲು ನನ್ನಿಂದಾಗದು. ಅಣ್ಣ ನನ್ನನ್ನು ಚೆನ್ನಾಗಿ ನೋಡಿಕೊಳ್ಳುವಾಗ, ನಾನು ನನ್ನಿಂದಾಗುವ ಕೆಲಸ ಮಾಡುತ್ತೇನೆ. ಯಾರೇನು ಅಂದುಕೊಂಡರೂ ನನಗೇನು ?" ಎಂದ ಸುಬ್ಬಣ್ಣ.



"ಅಷ್ಟೇ ನಿನ್ನ ಬುದ್ಧಿ. ಹುಚ್ಚ ! ಊರ ಪೋಲಿಗಳಿಗೆಲ್ಲಾ ಓದು ಬರಹ ಕಲಿಸಲು ಗಟ್ಟಿಗನಾದ ನಿನ್ನ ಅಣ್ಣನಿಗೆ, ತಮ್ಮನಿಗೆ ಕಲಿಸಿಕೊಡಲು ಸಾಧ್ಯವಿಲ್ಲವೇ ? ಹೌದು ಮತ್ತೆ ! ನೀನು ಓದಿಕೊಂಡವನಾದರೆ ತನಗೆ ಹೀಗೆ ಊಳಿಗ ಮಾಡಲು ಬೇರೆ ಯಾರಿದ್ದಾರೆ ? ಅದಕ್ಕೇ ನಿನಗೆ ಓದು ಬರಹ ಬಾರದ ಹಾಗೆ ಬಿಟ್ಟಿದ್ದಾನೆ" ಎಂದಳು ಸರಸಮ್ಮ.

ಸುಬ್ಬಣ್ಣಗೆ ಕೂಡಾ ಕ್ರಮವಾಗಿ ಸರಸಮ್ಮ ಹೇಳಿದ್ದು ನಿಜವೆಂದು ತೋರತೊಡಗಿತು. ಈ ಸಂಗತಿಯನ್ನು ಯಾರ ಮುಂದೆ ಹೇಳಿಕೊಳ್ಳುವುದೆಂದೇ ಅವನಿಗೆ ಗೊತ್ತಾಗಲಿಲ್ಲ. ತನ್ನ ತಂಗಿ ಗೌರಿಯೊಂದಿಗೆ ಗುಟ್ಟಾಗಿ ಹೇಳಿಕೊಂಡನು. ಗೌರಿ ತನ್ನ ಗೋಳನ್ನು ಸುಬ್ಬಣ್ಣನೊಂದಿಗೆ ಹೇಳಿಕೊಂಡಳು. ಇಲ್ಲಿ ತಮಗಿಬ್ಬರಿಗೂ ಭಾರಿ ಅನ್ಯಾಯವು ನಡೆಯುತ್ತಿದೆಯೆಂದು ಅವರಿಬ್ಬರೂ ನಿರ್ಧರಿಸಿಕೊಂಡರು.

ಗೌರಿಗೆ ಕೂಡಾ ಸಂಗೀತ ಜ್ಞಾನವಿತ್ತು. ಕಂಠವೂ ಚೆನ್ನಾಗಿತ್ತು. ಒಂದು ದಿನ ಗೌರಿ ಲಕ್ಷ್ಮಿಯೊಂದಿಗೆ "ಅತ್ತಿಗೇ, ನನಗೆ ದಿನಾ ಮನೆಗೆಲಸ ಮಾಡಿ ಮಾಡಿ ಬೇಜಾರಾಗಿ ಹೋಗಿದೆ. ಕೆಲವು ದಿನ ಮನೆಗೆಲಸ ನೀವು ನೋಡಿಕೊಂಡರೆ, ನಾನು ಸಂಗೀತ ಪಾಠ ಹೇಳುತ್ತೇನೆ. ಆಗದೆ ?" ಎಂದಳು. ಹಾಗೆಯೇ ಆಗಲೆಂದು ಲಕ್ಷ್ಮಿ ಕೂಡಲೇ ಒಪ್ಪಿಕೊಂಡಳು.

ಸುಬ್ಬಣ್ಣ ಕೂಡಾ ತನ್ನ ಅಣ್ಣನೊಂದಿಗೆ, "ನನಗೆ ಏಕೋ ಮೈ ಸರಿಯಾಗಿಲ್ಲ. ಅಣ್ಣಾ, ಕೆಲವು ದಿನ ಮನೆಯಲ್ಲಿದ್ದು ಓದಿಕೊಳ್ಳುವಾ ಅಂತ ಇದ್ದೇನೆ. ಹೊಲದ ಕೆಲಸಕ್ಕೆ ಒಬ್ಬ ಆಳನ್ನು ಇಟ್ಟುಕೊಳ್ಳೋಣ" ಎಂದನು. ರಾಮಣ್ಣನು ಅದಕ್ಕೆ ಸಂತೋಷದಿಂದ ಒಪ್ಪಿಕೊಂಡನು.

ಲಕ್ಷ್ಮಿ ಮನೆಗೆಲಸಗಳನ್ನು ಸುಲಭವಾಗಿ ಏನೂ ತೊಂದರೆಯಿಲ್ಲದೆ ಮಾಡುತ್ತಿದ್ದಳು. ಆದರೆ ಮಕ್ಕಳಿಗೆ ಸಂಗೀತ ಪಾಠ ಹೇಳಿಕೊಡಲು ಗೌರಿಯಿಂದ ಸಾಧ್ಯವಾಗಲಿಲ್ಲ. ತಾನು ಹೇಳುವುದನ್ನು ಸರಿಯಾಗಿ ಕಲಿಯುವುದಿಲ್ಲವೆಂದು ಅವಳು ಮಕ್ಕಳ ಮೇಲೆ ಮಾತು ಮಾತಿಗೂ ಸಿಡಿಮಿಡಿಗೊಳ್ಳುತ್ತಿದ್ದಳು.





ಆದರಿಂದ ನೊಂದುಕೊಂಡ ಅನೇಕ ಮಕ್ಕಳು ಕಲಿಯಲು ಬರುವುದನ್ನು ಬಿಟ್ಟರು. ಅದರಿಂದಾಗಿ ಆದಾಯವು ತಗ್ಗಿತು.

ಅನೇಕ ತಿಂಗಳು ಮನೆಯಲ್ಲಿ ಕುಳಿತು ಓದು ಬರೆಹ ಕಲಿಯುತ್ತಿದ್ದರೂ ಸುಬ್ಬಣ್ಣನಿಗೆ ಸ್ವಲ್ಪವೂ ಓದು ಬರೆಹ ಅಂಟಿಕೊಳ್ಳಲಿಲ್ಲ. ವ್ಯವಸಾಯದ ಕೆಲಸಕ್ಕೆ ನಿಯಮಿಸಿದ ಆಳು ಕೆಲಸದಲ್ಲಿ ಶ್ರದ್ಧೆ ತೋರಿಸಲಾರದೆ ಹೋದುದರಿಂದ, ಅಲ್ಲಿಯ ಆದಾಯವೂ ತಗ್ಗಿತು. ಅದರ ಮೇಲೆ ಅವನ ಸಂಬಳ ಖರ್ಚು ಕೂಡಿತು.

ಹೀಗಾದುದರಿಂದ ಲಕ್ಷ್ಮಿ ಗೌರಿಗಾಗಿ ಮಾಡಿಸ ಬೇಕೆಂದಿದ್ದ ಒಂದು ಚಿನ್ನದ ಸರವನ್ನು ಮಾಡಿಸಲು ಸಾಧ್ಯವಿಲ್ಲದೆ ಹೋಯಿತು. ರಾಮಣ್ಣ ಹೊಸದಾಗಿ ಕೊಂಡುಕೊಳ್ಳಬೇಕೆಂದಿದ್ದ ಹೊಲವನ್ನು ಕೊಂಡು ಕೊಳ್ಳಲಾರದೆ ಹೋದನು. ಈ ಪರಿಸ್ಥಿತಿಯನ್ನು ಮನದಂದು ಒಂದು ದಿನ ಲಕ್ಷ್ಮಿ ಗೌರಿಯನ್ನು ಹತ್ತಿರ ಕೂಡಿಸಿಕೊಂಡು, "ನೀನು ಸಂಗೀತ ಪಾಠ ಹೇಳ ಬೇಡಮ್ಮ. ನಿನಗೆ ಮನೆಗೆಲಸ ಭಾರವಾಗಿದ್ದರೆ, ಮನೆ ಗೆಲಸದೊಂದಿಗೆ ಸಂಗೀತ ಪಾಠ ನಾನೇ ಹೇಳುತ್ತೇನೆ. ನನ್ನಿಂದಾದೀತು" ಎಂದಳು.

ರಾಮಣ್ಣ ತನ್ನ ತಮ್ಮನೊಂದಿಗೆ, "ನಿನಗೆ ಆರೋಗ್ಯ ಚೆನ್ನಾಗುವವರೆಗೆ ನಾನೇ ಹೊಲದ ಕೆಲಸಕ್ಕೆ ಹೋಗುತ್ತೇನೆ. ಅದರೆಡೆಯಲ್ಲೇ ಪಾಠ ಹೇಳಲೂ ಸಮಯ ಮಾಡಿಕೊಳ್ಳುತ್ತೇನೆ. ಮನಸ್ಸು ಮಾಡಿದರೆ ಆಗದ್ದೇನೂ ಇಲ್ಲ" ಎಂದನು.

ಈ ಬಗೆಯ ಏರ್ಪಾಡನ್ನು ಕುರಿತು ಗೌರಿ ಯಾಗಲೀ, ಸುಬ್ಬಣ್ಣನಾಗಲೀ ಏನೂ ಹೇಳಲಿಲ್ಲ. ಅಂದಿನಿಂದ ಲಕ್ಷ್ಮಿಗೂ, ರಾಮಣ್ಣನಿಗೂ ಶ್ರಮ ತುಂಬಾ ಹೆಚ್ಚಿತು. ನೆರೆಮನೆಯ ಸರಸಮ್ಮನೊಂದಿಗೆ ಮಾತಾಡಲು ಗೌರಿಗೂ ಸುಬ್ಬಣ್ಣನಿಗೂ ಬಿಡುವು ಕೂಡಾ ಹೆಚ್ಚಿಗೇ ಆಯಿತು.

ಸರಸಮ್ಮ ಅವರಿಬ್ಬರನ್ನೂ ಅಭಿನಂದಿಸಿ ತುಂಬಾ ಹೊಗಳ ತೊಡಗಿದಳು. ಈಗ ಗೌರೀ ಸುಬ್ಬಣ್ಣಂದಿರು ಸರಸಮ್ಮನ ದೃಷ್ಟಿಯಲ್ಲಿ ತುಂಬ ಬುದ್ಧಿವಂತ ರೆನಿಸಿದರು.

ಆ ಸರಸಮ್ಮನ ಮೂಲದಿಂದಾಗಿಯೇ ಗೌರಿ ಯಲ್ಲಿಯೂ ಸುಬ್ಬಣ್ಣನಲ್ಲಿಯೂ ಬದಲಾವಣೆ ಯಾದುದೆಂದು ಲಕ್ಷ್ಮಿಗೂ ರಾಮಣ್ಣನಿಗೂ ಗೊತ್ತಿತ್ತು. ತಮ್ಮ ಒಳ್ಳೆಯತನದಿಂದಲೇ ಅವರಿಬ್ಬ ರನ್ನೂ ಸರಿದಾರಿಗೆ ತರಬೇಕೆಂದು ನೋಡಿದರು. ಅವರ ಪ್ರಯತ್ನ ಫಲಿಸಲಿಲ್ಲ. ಆದುದರಿಂದ ರಾಮಣ್ಣ ಒಂದು ಉಪಾಯವನ್ನು ಆಲೋಚಿಸಿದನು.

ಒಂದು ದಿನ ರಾಮಣ್ಣನೂ ಲಕ್ಷ್ಮಿಯೂ ಏನೋ ರಹಸ್ಯ ಮಾತಾಡಿಕೊಳ್ಳುವಂತೆ ನಟಿಸಿದರು, ಗೌರಿಯೂ ಸುಬ್ಬಣ್ಣನೂ ಅವರ ಮಾತುಗಳನ್ನು ಹೊಂಚಿಟ್ಟು ಕೇಳಿದರು. ಅವರಿಗೆ ಕೇಳಿಸಬೇಕೆಂತಲೇ ಲಕ್ಷ್ಮೀ ರಾಮಣ್ಣರು ಹೀಗೆ ಮಾತಾಡಿಕೊಂಡರು :

"ಗೌರಿಗೆ ಕೆಲಸ ಮಾಡಲು ತುಂಬಾ ಇಷ್ಟವಂತೆ ಆದರೆ ನನಗೆ ಸಹಾಯ ಮಾಡಲಿಕ್ಕೆ ಮಾತ್ರ ಅವಳಿಗೆ ಇಷ್ಟವಿಲ್ಲವಂತೆ. ನಮ್ಮಿಬ್ಬರಿಗೂ ಒಬ್ಬರ ಮೇಲೊಬ್ಬರಿಗೆ ಪ್ರಾಣವೆಂಬುದನ್ನು ತಿಳಿಯದೆ ಗೌರಿಯ ಮೇಲೆ ನನ್ನ ಹತ್ತಿರ ದೂರು ಹೇಳುತ್ತಾಳೆ ಆ ಸರಸಮ್ಮ. ಅವಳು ಹೇಳಿದ್ದೆಲ್ಲಾ ನಾನು ನಂಬುತ್ತೇನೆ ಅಂತ ಮಾಡಿದ್ದಾಳೆ ! ಗೌರಿ ಎಂಥ ಬಂಗಾರದವಳೂ ಅಂತ ನನಗಿಂತ ಹೆಚ್ಚು ಅವಳಿಗೆ ಗೊತ್ತೇನು ?" ಎಂದಳು ಲಕ್ಷ್ಮಿ.

"ಸುಬ್ಬಣ್ಣನ ಮೇಲೆ ಆ ಸರಸಮ್ಮ ನನ್ನ ಹತ್ತಿರವೂ ಏನೇನೋ ಹೇಳಿದಳು. ನಾನು ನಂಬುವೇನೇನು?" ಎಂದ ರಾಮಣ್ಣ.

"ಗೌರಿಗೆ ನನ್ನ ಮಾತಿಗಿಂತಲೂ ಅವಳ ಮಾತೇ ಹೆಚ್ಚಂತೆ. ಸರಸಮ್ಮ ಹೇಳಿ ಬಿಟ್ಟರೆ ಗೌರಿ ನನ್ನನ್ನು ಕಸಪರಿಕೆಯಿಂದ ಹೊಡೀಲಿಕ್ಕೂ ತಯಾರಂತೆ. ಸರಸಮ್ಮ ಹೀಗೆ ಹೇಳಿದಳೂ ಅಂತ ಗೌರಿಗೆ ಗೊತ್ತಾಗಿಬಿಟ್ರೆ, ಗೌರಿ ಸಗಸಮ್ಮನನ್ನೇ ಕಸಪರಿಕೆಯಿಂದ ಹೊಡೆದಾಳು" ಎಂದಳು ಲಕ್ಷ್ಮಿ.

"ಸುಬ್ಬಣ್ಣ ಕೂಡಾ ತಾನು ಹೇಳಿ ಬಿಟ್ಟರೆ ನನ್ನ ಜುಟ್ಟು ಹಿಡಿದು ಬೀದಿಗೆ ದೂಡುತ್ತಾನೆಂದು ನನ್ನ ಹತ್ತಿರ ಹೇಳುತ್ತಾಳೆ ಸರಸಮ್ಮ. ಈ ಮಾತು ಅವನ ಕಿವಿಗೆ ಬಿದ್ದರೆ ಸುಬ್ಬಣ್ಣ ಅವಳನ್ನೇ ಜುಟ್ಟು ಹಿಡಿದು ಬೀದಿಗೆ ದೂಡಿಯಾನು. ನನ್ನ ತಮ್ಮ ಎಂಥವನೆಂದು ನನಗೆ ಗೊತ್ತಿಲ್ಲವೆ?" ಎಂದ ರಾಮಣ್ಣ.

ಹೀಗೆ ಗಂಡ ಹೆಂಡಿರು ಬಹಳ ಹೊತ್ತು ಮಾತಾಡಿಕೊಂಡರು. ಆಮೇಲೆ ಅವರಿಬ್ಬರೂ ಈಚೆಗೆ ಬಂದು ನೋಡಿದರೆ ಗೌರಿ ಸುಬ್ಬಣ್ಣರು ಅಲ್ಲೆಲ್ಲಿಯೂ ಕಾಣಲಿಲ್ಲ. ಬೀದಿಯಲ್ಲಿ ಏನೋ ಕಲಕಲರವ ಕೇಳುತ್ತಿತ್ತು. ಗಂಡ ಹೆಂಡಿರು ಆಶ್ಚರ್ಯದಿಂದ ಆಕಡೆಗೆ ಹೋದರು. ಆಗಲೇ ಅನೇಕ ಮಂದಿ ಆ ದೃಶ್ಯವನ್ನು ನೋಡಿ ವಿನೋದಿಸುತ್ತಿದ್ದರು.

ಸುಬ್ಬಣ್ಣನು ಸರಸಮ್ಮನನ್ನು ಜುಟ್ಟು ಹಿಡಿದು ಬೀದಿಗೆ ಎಳೆದು ತಂದಿದ್ದನು. ಗೌರಿ ಅವಳ ಬೆನ್ನಿನ ಮೇಲೆ ಕಸಪರಿಕೆಯನ್ನು ಹೊರಳಾಡಿಸುತ್ತಿದ್ದಳು.

ರಾಮಣ್ಣ ಓಡಿ ಹೋಗಿ ಸುಬ್ಬಣ್ಣ ಗೌರಿಯರನ್ನು ಒಂದೊಂದು ಕೈಯಲ್ಲಿ ಹಿಡಿದು ಮನೆಯೊಳಗೆ ಎಳೆದು ತಂದರು.

ಮೂರನೇ ದಿನವೇ ಸರಸಮ್ಮನೂ, ಅವಳ ಗಂಡನೂ ಮನೆ ಖಾಲಿಮಾಡಿ ಎಲ್ಲಿಗೋ ಹೊರಟು ಹೋದರು. ಕಾರಣವೇನೆಂದರೆ, ಎಲ್ಲರೂ ಕೂಡಿಕೊಂಡು ಆಪ್ಯಾಯವಾಗಿರುವ ಕುಟುಂಬದ ನೆರೆಯಲ್ಲಿ ಇಂಥ ಸರಸಮ್ಮಂದಿರು ಇರಲು ಸಾಧ್ಯವಿಲ್ಲ. ಆ ಮನೆಯನ್ನು ಅವರು ಯಾರಿಗೋ ಮಾರಿದರೆಂದೂ ತಿಳಿಯಿತು.



# ಮಂತ್ರಿಯ ಬುದ್ಧಿವಂತಿಕೆ

ವಿಜಯಪುರದಲ್ಲಿ ಸಿಂಗಣ್ಣನೆಂಬ ಪಕ್ಕಾಕಳ್ಳನಿದ್ದ. ಅವನು ಕಳ್ಳತನ ಮಾತ್ರವಲ್ಲದೆ, ಅನೇಕ ಕೊಲೆಗಳನ್ನೂ ಮಾಡಿದ್ದ. ರಾಜಭಟರಿಗೆ ಸಿಕ್ಕದೆ ತಪ್ಪಿಸಿಕೊಳ್ಳುವುದರಲ್ಲಿ ಮಹಾಚಾಣಾಕ್ಷ.

ಕಡೆಗೆ ರಾಜನು ಅವನನ್ನು ಹಿಡಿದು ಕೊಟ್ಟವರಿಗೆ ನೂರು ಬಂಗಾರದ ಮೊಹರಿಗಳನ್ನು ಕೊಡುವುದಾಗಿ ಊರೆಲ್ಲಾ ಡಂಗುರ ಹೊಡೆಸಿದನು.

ಒಂದು ದಿನ ರಾಮನೆಂಬ ರೈತನು ಕತ್ತಲೆಯಲ್ಲಿ ಗದ್ದೆಗೆ ಹೋಗುತ್ತಿದ್ದಾಗ ಊರಿನ ಕಡೆಗೆ ಬರುವ ಇಬ್ಬರು ಪ್ರಯಾಣಿಕರನ್ನು ಯಾವನೋ ಕಳ್ಳನೊಬ್ಬ ಅಟಕಾಯಿಸಿ ಸುಲಿಗೆ ಮಾಡುವುದನ್ನು ನೋಡಿದನು. ಅವನೇ ಪಕ್ಕಾಕಳ್ಳ ಸಿಂಗಣ್ಣನೆಂದುಕೊಂಡು ರಾಮನು ಒಂದು ಮರದ ಹಿಂದೆ ಅಡಗಿ, ಕೈಯಲ್ಲಿದ್ದ ಹಗ್ಗವನ್ನು ಸಿದ್ಧಪಡಿಸಿಕೊಂಡು ಹೊಂಚಿ ನಿಂತನು.

ಕಳ್ಳನು ಆ ದಾರಿಯಾಗಿ ಬರುವಾಗ, ತನ್ನ ಭುಜದ ಮೇಲಿದ್ದ ಹಗ್ಗವನ್ನು ಬೀಸಿ ಕಳ್ಳನನ್ನು ಹಿಡಿದುಕಟ್ಟಿ, ಎಳೆದುಕೊಂಡು ರಾಜನ ಬಳಿಗೆ ಹೊರಟನು.

ದಾರಿಯಲ್ಲಿ ರಾಮನಿಗೆ ಸೋಮನೆಂಬ ಇನ್ನೊಬ್ಬ ರೈತನು ಇದಿರಾಗಿ ಬಂದು, ಏನು ಸಮಾಚಾರವೆಂದು ಕೇಳಿದನು.

ತಾನು ಪಕ್ಕಾಕಳ್ಳ ಸಿಂಗಣ್ಣನನ್ನು ಹಿಡಿದೆನೆಂದೂ, ರಾಜರು ತನಗೆ ನೂರು ಬಂಗಾರದ ಮೊಹರೀ ಬಹುಮಾನ ಕೊಡುವರೆಂದೂ ಹೇಳಿದನು ರಾಮ. ಕೂಡಲೇ ಸೋಮನು ರಾಮನ ನೆತ್ತಿಯ ಮೇಲೆ ತನ್ನ ಕೈಯಲ್ಲಿದ್ದ ಬಡಿಗೆಯಿಂದ ಬಲವಾಗಿ ಹೊಡೆದು ಮೂರ್ಛೆ ಬರುವಂತೆ ಬೀಳಿಸಿ, ಕಳ್ಳನನ್ನು ಎಳೆದುಕೊಂಡು ತಾನೇ ರಾಜನ ಬಳಿಗೆ ಹೊರಟನು.

ಸೋಮನು ರಾಜಸಭೆಯನ್ನು ಪ್ರವೇಶಿಸುವುದರೊಳಗೆ ರಾಮನಿಗೆ ಮೂರ್ಛೆ ತಿಳಿದು ಎಚ್ಚರವಾಗಿ ಬೇಗ ಬೇಗನೇ ರಾಜನ ಸಭೆಗೆ ಬಂದನು. ಕಳ್ಳನನ್ನು ಹಿಡಿದವನು ನಾನು ತಾನು ಎಂದು ರಾಮ ಸೋಮರಿಬ್ಬರೂ ಹೇಳಿದರು.

ರಾಜನು ಮಂತ್ರಿಯ ಮುಖ ನೋಡಿದನು. ಮಂತ್ರಿ ಕಳ್ಳನನ್ನು ಹತ್ತಿರ ಕರೆದುಕೊಂಡು, " ಇವನು ಕಳ್ಳನಲ್ಲ ಮಹಾರಾಜರೇ. ನಮ್ಮ ಆಸ್ಥಾನದ ಜೋಯಿಸರ ಮಗ " ಎಂದನು.

ಆಗ ಸೋಮನು ಕಳ್ಳನನ್ನು ಹಿಡಿದವನು ತಾನಲ್ಲವೆಂದೂ, ರಾಮನೇ ಎಂದೂ ಹೇಳಿಬಿಟ್ಟನು. ರಾಜನು ಸೋಮನಿಗೆ ಇಪ್ಪತ್ತು ಛಡಿಯೇಟುಗಳನ್ನೂ ರಾಮನಿಗೆ ನೂರು ಬಂಗಾರದ ಮೊಹರಿಗಳನ್ನೂ ಕೊಡಿಸಿದನು.





# ದೇವೀಭಾಗವತ

ಪ್ರಪಂಚವನ್ನೆಲ್ಲಾ ಆಳುವ ಚಕ್ರವರ್ತಿಯಾಗಿದ್ದು, ಕೇಳಿದವರಿಗೆ ಇಲ್ಲವೆನ್ನದೆ ಅಪಾರವಾಗಿ ದಾನ ಧರ್ಮಗಳನ್ನು ಕೊಡುತ್ತ, ಸತ್ಯಸಂಧನೆಂಬ ಕೀರ್ತಿಗೆ ಪಾತ್ರನಾಗಿ, ಇಂದ್ರನಿಗೂ ವಿಷ್ಣುವಿಗೂ ಸಮಾನನೆಂದು ಎಲ್ಲರಿಂದಲೂ ಅನ್ನಿಸಿಕೊಂಡ ತನ್ನ ಪತಿಯಾದ ಹರಿಶ್ಚಂದ್ರನಿಗೆ ಇಂಥಾ ದುಸ್ಥಿತಿ ಏಕೆ ಬಂತೆಂದು ಶೈಬ್ಯಳಿಗೆ ಅರ್ಥವಾಗಲಿಲ್ಲ. ಅಂತಹ ತಪ್ಪು ಏನು ಮಾಡಿದನೋ? ಒಂದುವೇಳೆ ತಿಳಿಯದೆ ಮಾಡಿದ ತಪ್ಪಿಗೆ ಇಷ್ಟು ಕಠಿಣ ಶಿಕ್ಷೆ ಬೀಳುವುದೆಂದರೇನು? ದುಃಖಾವೇಗದಲ್ಲಿ ಅವಳಿಗೂ ಮೂರ್ಛೆ ಬಂದಿತು.

ತಂದೆ ತಾಯಿಗಳು ಸಮ್ಮನೆ ಬಿದ್ದಿರುವುದನ್ನು ನೋಡಿ ಅವರ ಮಗ ರೋಹಿತನು ಹಸಿವೆಯಿಂದಲೂ ದಾಹದಿಂದಲೂ ಅಳಲಿಕ್ಕೂ ಶಕ್ತಿಯಿಲ್ಲದೆ ಅವರ ಪಕ್ಕದಲ್ಲಿ ದೀನನಾಗಿ ಕುಳಿತನು. ತನ್ನ ಹಸಿವೆಗೆ ಏನಾದರೂ ತಿನ್ನಬೇಕೆಂದು ನೋಡುತ್ತಿದ್ದನು. ಏನೂ ತೋರದೆ ಹೊಟ್ಟೆಯೊತ್ತಿಕೊಂಡು ಕುಳಿತಿದ್ದನು,

ಆಗ ಬ್ರಾಹ್ಮಣ ವೇಷದ ವಿಶ್ವಾಮಿತ್ರನು ಅಲ್ಲಿಗೆ ಬಂದು, ಮೂರ್ಛೆ ಹೋಗಿ ಬಿದ್ದಿರುವವನ್ನು ನೋಡಿ ತಲೆಯಾಡಿಸುತ್ತ, ಅವರ ಮುಖಕ್ಕೆ ತಣ್ಣೀರು ತಳಿದನು. ಅವರಿಬ್ಬರೂ ಮೂರ್ಛೆ ತಿಳಿದು ಎದ್ದರು. ಇದಿರಿನಲ್ಲಿ ದುರುದುರು ನೋಡುವ ಬ್ರಾಹ್ಮಣನನ್ನು ನೋಡಿ, ತಡಬಡಿಸಿಕೊಂಡು ಇಬ್ಬರೂ ಕೈ ಮುಗಿದು ನಿಂತರು.

"ಏನಯ್ಯಾ ಹರಿಶ್ಚಂದ್ರಾ! ಹೇಳಿದ ಮಾತು ಉಳಿಸಿಕೊಳ್ಳುವ ಗೊಡವೆಯಿಲ್ಲದೆ, ಹೀಗೆ ಬಿದ್ದುಕೊಂಡರೆ ಏನರ್ಥ? ಮಾತು ಉಳಿಸಿಕೊಳ್ಳಬೇಕಾದರೆ ನನ್ನ ದಕ್ಷಿಣೆ ಎರಡು ಖಂಡಿ ಚಿನ್ನ ಕೊಟ್ಟುಬಿಡು. ಹಗಲು ಇನ್ನು ಅರ್ಧ ಭಾಗವಷ್ಟೇ ಇದೆ. ಸೂರ್ಯನು ಅಸ್ತಮಿಸುವುದರೊಳಗೆ ದಕ್ಷಿಣೆಯ ಹಣಕೊಡದೇ ಹೋದರೆ ನಿನ್ನನ್ನು ನಿಶ್ಚಯವಾಗಿ ಶಪಿಸಿಬಿಡುತ್ತೇನೆ. ಆಮೇಲೆ ನನ್ನನ್ನು ದೂರಿ ಪ್ರಯೋಜನವಿಲ್ಲ. ಜಾಗ್ರತೆ!" ಎಂದನು ಕಠಿಣವಾಗಿ. ಹೀಗೆ ಹೇಳಿ ಬ್ರಾಹ್ಮಣ ರೂಪದ ವಿಶ್ವಾಮಿತ್ರನು

೨೭. ಹರಿಶ್ಚಂದ್ರನ ಬಂಧ ವಿಮುಕ್ತಿ



ಅವಳ ಮಾತು ಕೇಳಿ ಹರಿಶ್ಚಂದ್ರನು, "ಏನೆಂದೆ? ಕ್ಷತ್ರಿಯಜನ್ಮ ಎತ್ತಿದ ನಾನು ಕೈನೀಡಿ ಒಬ್ಬರನ್ನು ಹೇಗೆ ಕೇಳಲು ಸಾಧ್ಯ? ಪಡೆದುಕೊಳ್ಳುವ ಅಧಿಕಾರವು ಬ್ರಾಹ್ಮಣ ನೊಬ್ಬನಿಗೇ ಇರುತ್ತದೆ. ಉಳಿದವರ್ಣದ ವರಿಗೆ ಬ್ರಾಹ್ಮಣರು ಗುರುಗಳಿದ್ದ ಹಾಗೆ. ಗುರುಗಳಿಗೆ ಕೊಡಬೇಕೇ ಹೊರತು, ಕೈ ನೀಡಿ ಕೇಳುವುದು ಧರ್ಮವಲ್ಲ. ಕ್ಷತ್ರಿಯ ಧರ್ಮವಂತೂ ಅಲ್ಲವೇ ಅಲ್ಲ. ಇದನ್ನು ತಿಳಿದೂ ಇದಕ್ಕೆ ವಿರುದ್ಧವಾದ ಕಾರ್ಯವನ್ನು ಮಾಡಲು ಹೇಳುವೆಯಾ ?" ಎಂದನು.

"ಕಾಲಪರಿಸ್ಥಿತಿಗೆ ತಕ್ಕ ಹಾಗೆ ಮಾನಾವ ಮಾನಗಳೂ, ದಾನಕೊಡುವುದೂ ಪಡೆಯುವುದೂ ನಡೆಯುತ್ತವೆ. ಗುರುವಾಗಿ ಧರ್ಮ ಪೋಷಕನಾಗಿರ ಬೇಕಾಗಿದ್ದ ಬ್ರಾಹ್ಮಣನು ಇಷ್ಟೊಂದು ಅನ್ಯಾಯ ದಿಂದ ಪೀಡಿಸುವುದುಂಟೇ ? ಅವನ ದುರಾಶೆ ನ್ಯಾಯವೇನು ?" ಎಂದಳು ರಾಣಿ.

ಆದಕ್ಕೆ ಹರಿಶ್ಚಂದ್ರನು, "ದೇವೀ ! ನೀನು ಸಹನೆ ಕಳೆದು ಬ್ರಾಹ್ಮಣರನ್ನು ದೂಷಿಸುವುದು ಸರಿಯಲ್ಲ. ಹೆಣ್ಣಾದವಳು ಸಹನೆಯ ಮೂರ್ತಿಗಳಾಗಿರಬೇಕು. ನಿನ್ನಲ್ಲಿ ಅದು ಕಡಿಮೆಯಾಗಿರಲು ಕೂಡಾ ಆ ಕಾಲ ಯೋಗ ಪರಿಸ್ಥಿತಿಗಳೇ ಕಾರಣವೆನ್ನಬೇಕು. ಅದು ಬಿಡು. ನಾನಂತೂ ಕತ್ತಿಯಿಂದ ನಾಲಗೆಯನ್ನಾದರೂ ಕೊಯಿದು ಕೊಂಡೇನೇ ಹೊರತು ಒಬ್ಬರನ್ನು ದೇಹಿ ಎಂದು ಕೇಳುವೆನೆಂದು ತಿಳಿಯಬೇಡ, ತ್ರಿಶಂಕು ಮಹಾರಾಜನ ಮಗನು ಅಷ್ಟೊಂದು ದೀನ ನಾಗಲಾರನು. ಕೈಲಾದರೆ ಭುಜಬಲದಿಂದ ಧನ ಸಂಪಾದಿಸುವೆನೇ ಹೊರತು ಬೇಡಿ ಹಣ ಸಂಪಾದಿಸ ಲಾರೆನು. ಹಾಗೆ ಮಾಡಿದರೆ ನನ್ನ ಹಿರಿಯರ ಧವಳ ಕೀರ್ತಿಗೆ ಕೂಡಾ ಕಳಂಕ !" ಎಂದನು.

"ಸರಿ; ಯಾಚನೆ ಮಾಡಲು ಅಭ್ಯಂತರವಿದ್ದರೆ ನನ್ನನ್ನು ಮಾರಿ ನಿಮ್ಮ ಕೀರ್ತಿಯನ್ನು ಕಾಪಾಡಿ ಕೊಳ್ಳಿರಿ. ಮಾರುವುದಕ್ಕೂ, ಅಂದಣ ವೇರಿಸಲಿಕ್ಕೂ,

ಅಲ್ಲಿಂದ ಹೊರಟುಹೋದನು. ಸ್ವಲ್ಪ ಹೊತ್ತಿಗೆಲ್ಲಾ ವಿಶ್ವಾಮಿತ್ರನ ಮಾಯೆಯಿಂದ ವೇದಾಧ್ಯಯನ ಪರನಾದಂತಹ ಇನ್ನೊಬ್ಬ ಬ್ರಾಹ್ಮಣನು ಆ ದಾರಿ ಯಾಗಿ ಬಂದನು. ಅವನ ಹಿಂದೆ ಅನೇಕ ಮಂದಿ ಬ್ರಾಹ್ಮಣರೂ ಇದ್ದರು.

ಹರಿಶ್ಚಂದ್ರನ ಹೆಂಡತಿ ಆ ಬ್ರಾಹ್ಮಣ ಮುಖ್ಯ ನನ್ನು ನೋಡಿ, ತನ್ನ ಪತಿಯೊಂದಿಗೆ, "ಅಲ್ಲಿ ನೋಡಿ. ಒಬ್ಬ ವೇದಜ್ಞನಾದ ಬ್ರಾಹ್ಮಣನು ಅನೇಕಮಂದಿ ಬ್ರಾಹ್ಮಣರೊಂದಿಗೆ ಬರುತ್ತಿದ್ದಾನೆ. ಅವನನ್ನು ಕೇಳಿದರೆ ಬೇಕಾಗುವ ಧನ ಸಿಗಬಹುದು ರಾಜನಾಗಿರುವ ನೀವು ಉಳಿದ ವರ್ಣದವರಿಗೆಲ್ಲ ತಂದೆಯಾಗುವುದರಿಂದ ಅವರು ನಿಮಗೆ ಮಗನ ಹಾಗಾಗುವರು. ಮಕ್ಕಳಿಂದ ಧನವನ್ನು ಕೇಳಿ ಪಡೆಯುವುದರಿಂದ ತಪ್ಪೇನೂ ಇಲ್ಲವಷ್ಟೆ? ಕಷ್ಟ ಬರುವುದು ಯಾರಿಗೂ ಸಹಜ. ದಾಕ್ಷಿಣ್ಯಪಡದೆ ಕೇಳಿರಿ" ಎಂದಳು.



ಇಳಿಸಲಿಕ್ಕೂ ಮತ್ತೇನೇ ಮಾಡಲಿಕ್ಕೂ ಹೆಂಡತಿ ಎಂಬ ವ್ಯಕ್ತಿ ಉಪಯೋಗ ಬೀಳುತ್ತಾಳಷ್ಟೆ? ನಿಮ್ಮ ಸತ್ಯವನ್ನು ಕಾಪಾಡಿ, ಕೊಟ್ಟಮಾತು ಉಳಿಸಿಕೊಂಡು, ಆಶಬಾಕ ಬ್ರಾಹ್ಮಣನನ್ನು ತೃಪ್ತಿಬಡಿಸಲು ಬೇರೆ ಉಪಾಯವೇನಿದೆ? ಗಡು ಮೀರಿಹೋದರೆ ಕೆಟ್ಟ ಶಾಪ ಕೊಡುವುದಾಗಿ ಎಚ್ಚರಿಸಿದ್ದಾನೆ. ಆ ಗಡು ಸಮೀಪದಲ್ಲೇ ಇದೆ" ಎಂದು ಹೆಂಡತಿ ಹೇಳಿದ ಮಾತುಗಳನ್ನು ಕೇಳಿ ಹರಿಶ್ಚಂದ್ರನಿಗೆ ದುಃಖವು ಉಕ್ಕಿ ಬಂತು. ಅದನ್ನು ನೋಡಿ ಅವಳು ಹರಿಶ್ಚಂದ್ರನಿಗೆ ಸಮಾಧಾನ ಹೇಳುತ್ತ, "ಧೈರ್ಯವಾಗಿರಿ. ನಾನೇನು ಹೇಳಿದೆ? ನನ್ನನ್ನು ಮಾರಿಬಿಡಿ ಎಂದೆ. ಜೂಜಾಟಕ್ಕಲ್ಲ, ಮಧುಪಾನಕ್ಕಲ್ಲ. ಭೋಗಭಾಗ್ಯಗಳಿಗೂ ಅಲ್ಲ. ನಿಮ್ಮ ಸತ್ಯವನ್ನು ನಿಲ್ಲಿಸಲಿಕ್ಕಾಗಿ ಹೆಂಡತಿಯನ್ನು ಮಾರುವುದು ತಪ್ಪೇನೂ ಅಲ್ಲ. ನಿಮ್ಮ ವಿಷಯ ನನಗೆ ಗೊತ್ತಿದೆ. ನನ್ನ ವಿಷಯ ನಿಮಗೆ ಗೊತ್ತಿದೆ. ಒಳ್ಳೆಯ ಕಾಲ ಕೂಡಿ ಬಂದಾಗ ಮತ್ತೆ ನನ್ನನ್ನು ಕೊಂಡು ಕೊಂಡರಾಯಿತು" ಎಂದು ಹರಿಶ್ಚಂದ್ರನನ್ನು ಅನೇಕ ವಿಧವಾಗಿ ಹೇಳಿ ಒಪ್ಪಿಸಿದಳು.

ಆಗ ಹರಿಶ್ಚಂದ್ರನು ಅವಳೊಂದಿಗೆ, "ಸರಿ. ನಿನ್ನ ಮಾತು ಕೇಳಿ, ಯಾರೂ ಮಾಡದ ಕೆಲಸವನ್ನು ಮಾಡುತ್ತೇನೆ. ಯಾವ ಯುಗದಲ್ಲಿಯೂ ಹೆಂಡತಿಯನ್ನು ಮಾರಿಕೊಂಡ ಪಾಪಾತ್ಮನಿರಲಾರ. ನಾನೊಬ್ಬ ಭಾಗ್ಯ ಹೀನನಾದವನು. ನೀನು ಹೇಳಿದಂತೆ ಬೇರೆ ದಾರಿ ಯಾವುದೂ ನಮಗಿಲ್ಲ. ಅದಕ್ಕೇ ಹತ್ತು ಮಂದಿಯ ಮುಂದೆ ತಲೆಬಗ್ಗಿಸುವ ಕಾರ್ಯವನ್ನು ಮಾಡುತ್ತೇನೆ." ಎಂದನು.

ಅವನು ತನ್ನ ಹೆಂಡತಿಯನ್ನು ಒಂದು ಕಡೆಯಲ್ಲಿ ನಿಲ್ಲಿಸಿ ಗದ್ಗದ ಸ್ವರದಿಂದ ದಾರಿಯಲ್ಲಿ ಹೋಗುವವರನ್ನು ನೋಡಿ ಹೀಗೆ ಹೇಳ ತೊಡಗಿದನು:

"ನಾಗರಿಕರೇ! ಕರುಣಾ ಶಾಲಿಗಳೇ! ಇವಳು ನನ್ನ ಹೆಂಡತಿ. ಇವಳನ್ನು ಯಾರಿಗಾದರೂ ಚಾಕರಿ ಮಾಡಲು ಬಿಟ್ಟುಕೊಡುತ್ತೇನೆ. ತಕ್ಕ ಹಣ ಸಿಕ್ಕಿದರೆ ಮಾರಿಬಿಡುತ್ತೇನೆ. ಎಲ್ಲಾ ಮನೆಗೆಲಸಗಳನ್ನೂ ಚೆನ್ನಾಗಿ ಮಾಡುತ್ತಾಳೆ. ಸಾಧುವಾಗಿ ಹೇಳಿದ್ದು ಕೇಳಿಕೊಂಡಿರುತ್ತಾಳೆ. ಬನ್ನಿರಯ್ಯಾ! ಕೊಳ್ಳುವಶಕ್ತಿ ಇದ್ದವರು ಮುಂದೆ ಬನ್ನಿ!"

ಅವರ ಸುತ್ತಲೂ ಅನೇಕರು ಬಂದು ನಿಂತರು. ಹೆಂಡತಿಯನ್ನು ಮಾರಬೇಕಾದ ಅಗತ್ಯವೇನು ಬಂತೆಂದು ಕೆಲವರು ಪ್ರಶ್ನೆ ಮಾಡಿದರು.

ಅಂಥವರಿಗೆ ಹರಿಶ್ಚಂದ್ರನು ಹೀಗೆಂದನು: "ಅಯ್ಯಾ, ಅದೆಲ್ಲಾ ನಿಮಗೇಕೆ? ಅರ್ಧಸತ್ತ ನಾನು ಮಹಾ ಪಾಪಿ! ಪರಮ ಕಿರಾತಕನಾದ ರಾಕ್ಷಸನಂಥವನು. ನನ್ನ ಹೆಸರು ನೆನೆಯುವುದೂ ಮಹಾ ಪಾಪ! ಅಂತಹ ನನ್ನನ್ನು ಕುರಿತು ನಿಮಗೇಕೆ? ಬೇಕಾದರೆ ಇವಳನ್ನು ತಕ್ಕ ಬೆಲೆ ಕೊಟ್ಟು ಕೊಂಡುಕೊಳ್ಳಿ" ಎಂದು ಹುಚ್ಚನಂತೆ ಕಿರಿಚಿಕೊಂಡು ಹೇಳಿದನು. ಅದನ್ನು ಕೇಳಿ ಅನೇಕರಿಗೆ ಅನುತಾಪ



ವಾಯಿತು. ಕೆಲವರಿಗೆ ಕಂಬನಿ ತುಂಬಿತು. ಆಗ ವಿಶ್ವಾಮಿತ್ರನು ಮತ್ತೊಬ್ಬ ಮುದುಕ ಬ್ರಾಹ್ಮಣನ ವೇಷದಲ್ಲಿ ಬಂದು, "ನನ್ನ ಹತ್ತಿರ ಇರುವ ಧನಕ್ಕೆ ಅಳತೆಯೇ ಇಲ್ಲ. ಸುಕುಮಾರಿಯಾದ ನನ್ನ ಹೆಂಡತಿ ಯಾವ ಕೆಲಸವನ್ನೂ ಮಾಡುವುದಿಲ್ಲ. ನೀನು ಕೇಳುವಷ್ಟು ಹಣ ಕೊಡುತ್ತೇನೆ. ನಿಜಕ್ಕೂ ನಿನ್ನ ಹೆಂಡತಿಯನ್ನು ಮಾರುವಿಯಾ?" ಎಂದು ಕೇಳಿದನು. ಪ್ರತ್ಯುತ್ತರ ಕೊಡಲು ಹರಿಶ್ಚಂದ್ರನಿಗೆ ಬಾಯಿ ಏಳಲೇ ಇಲ್ಲ. ಅವನು ಸುಮ್ಮನೆ ತಲೆತಗ್ಗಿಸಿಕೊಂಡಿರಲು, ಮತ್ತೆ ವಿಶ್ವಾಮಿತ್ರನು ಅವನನ್ನು ನೋಡಿ, "ಮೂವತ್ತೆರಡು ಲಕ್ಷಣಗಳಿರುವ ಸ್ತ್ರೀಗೆ ಒಂದು ಕೋಟಿ ಅಥವಾ ಒಂದು ಖಂಡಿ ಚಿನ್ನವೆಂದು ಶಾಸ್ತ್ರದಲ್ಲಿ ಹೇಳಿದೆ. ಈ ಸ್ತ್ರೀಯನ್ನು ಆ ಬೆಲೆಗೆ ಕೊಂಡು ಕೊಳ್ಳುತ್ತೇನೆ" ಎಂದನು. ಹರಿಶ್ಚಂದ್ರನ ಬಾಯಿಯಿಂದ ಮಾತೇ ಹೊರಡಲಿಲ್ಲ. ಬ್ರಾಹ್ಮಣನು ಒಂದು ಖಂಡಿ ಚಿನ್ನದ ನಾಣ್ಯಗಳನ್ನು ಅವನ ಮುಂದೆ ಸುರಿದು ಅವನ ಹೆಂಡತಿಯೊಂದಿಗೆ, "ಈಗ ನೀನು ನನ್ನ ಸೇವಕಿ. ದಾಸಿ, ಕೂಡಲೇ ಇತ್ತಬಾರದೆ, ಹಾಗೆ ನಿಂತಿರುವೆಯಲ್ಲಾ? ನಡೆ ಹೋಗೋಣ!" ಎನ್ನುತ್ತ ಅವಳ ತಲೆ ಕೂದಲು ಹಿಡಿದು ಎಳೆದನು.

"ಅಯ್ಯಾ, ನನ್ನ ಮೇಲೆ ಕೈ ಹಾಕಬೇಡಿ. ನಾನಾಗಿಯೇ ಬರುತ್ತೇನೆ. ನಾನು ನನ್ನ ಮಗನನ್ನು ಬಿಡಲಾರೆ. ಪತಿವ್ರತೆಯಾದ ನನ್ನನ್ನು ಹೀಗೆಲ್ಲಾ ಮುಟ್ಟಿ ಎಳೆಯಬಾರದು. ಕುಟುಂಬಸ್ಥರಾದ ನಿಮಗೆ ತಿಳಿಯದ್ದೇನಿದೆ?" ಎಂದಳು.

ರೋಹಿತನು "ಅಮ್ಮಾ! ಅಮ್ಮಾ!" ಎಂದು ಅವಳ ಹಿಂದೆ ಹೋದನು. ಆ ಬ್ರಾಹ್ಮಣನು ಅವಳ ಕೂದಲನ್ನು ಬಿಟ್ಟು, "ಹೋಗಾಚೆ" ಎಂದು ರೋಹಿತನನ್ನು ಹೊಡೆದನು.

ಅದನ್ನು ನೋಡಿ ಹರಿಶ್ಚಂದ್ರನ ಹೆಂಡತಿ, ಆ ಬ್ರಾಹ್ಮಣನೊಂದಿಗೆ, "ಅಯ್ಯಾ, ನನ್ನನ್ನು ಕೊಂಡು ಕೊಂಡ ಹಾಗೆಯೇ ನನ್ನ ಮಗನನ್ನು ಕೂಡಾ ಕೊಂಡುಕೊಳ್ಳಿ. ನನಗೆ ಅವನೊಬ್ಬನೇ ಮಗ. ಅವನಿಲ್ಲದಿದ್ದರೆ ನಾನು ಕೆಲಸ ಸರಿಯಾಗಿ ಮಾಡಲಾರೆನು. ಅವನಿದ್ದರೆ ಅವನೂ ನಿಮಗೆ ಸಣ್ಣಪುಟ್ಟ ಕೆಲಸಗಳಿಗೆ ಉಪಯೋಗವಾಗುವನು. ನನ್ನನ್ನು ಕೊಂಡುಕೊಂಡ ದಯಾಳುವಾದ ನಿಮಗೆ ಅವನೊಂದು ಹೊರೆಯಾಗಲಾರನು. ಅವನಿಗೂ ಒಂದು ಬೆಲೆ ಕಟ್ಟಿ ಕೊಂಡುಕೊಳ್ಳಿ, ಸ್ವಾಮಿ!" ಎಂದಳು.

"ಅದೂ ಒಳ್ಳೆಯದೆ. ಅವನೂ ನನ್ನ ಸೇವಕನಾಗಿರಲಿ. ಅವನಿಗೆ ನೂರು ಚಿನ್ನದ ನಾಣ್ಯಗಳನ್ನು ಕೊಡುತ್ತೇನೆ" ಎಂದು ಹೇಳಿ ಮತ್ತೆ ನೂರು ನಾಣ್ಯಗಳನ್ನು ಕೊಟ್ಟು, ಅವನನ್ನೂ ಕೊಂಡುಕೊಂಡು ತನ್ನ ಹಿಂದೆ ಬರಲು ಹೇಳಿದನು.

ಶೈಬ್ಯಳು ಗಂಡನಿಗೆ ಪ್ರದಕ್ಷಿಣೆಮಾಡಿ ತನ್ನ ತಲೆಯನ್ನು ಅವನ ಪಾದಗಳ ಮೇಲೆ ಇಟ್ಟು, "ಎಷ್ಟು

ಜನ್ಮಗಳಾದರೂ ನೀವೇ ನನ್ನ ಗಂಡನಾಗಿರಬೇಕು!" ಎಂದಳು. ಅವಳು ಪರರ ಮನೆಯಲ್ಲಿ ಹೇಗೆ ಚಾಕರಿ ಮಾಡುವಳೋ, ಏನೇನು ಕಷ್ಟಗಳನ್ನು ಇದಿರಿಸ ಬೇಕಾಗುವುದೋ, ತಾನಿಲ್ಲದೆ ಹೇಗೆ ಬದುಕುವಳೋ ಎಂದು ಊಹಿಸಲಾಗದೆ ಹರಿಶ್ಚಂದನು ತಹತಹಿಸಿ ದನು. ತನ್ನ ಮಗನು ತನಗೆ ದೂರನಾಗುವನೆಂದು ಕೊಂಡು ಹೆಚ್ಚಿನ ಸಂಕಟವನ್ನು ಅನುಭವಿಸಿದನು. ರಾಜ್ಯತ್ಯಾಗಕ್ಕಿಂತಲೂ ಪುತ್ರತ್ಯಾಗವು ಅವನನ್ನು ವಿಶೇಷವಾಗಿ ನೋಯಿಸುತ್ತಿತ್ತು. ಇದೆಲ್ಲದರ ಮೇಲೆ ಈಗ ಒಮ್ಮೆಗೇ ಅವನು ಕೇಳುವವರಿಲ್ಲದ ಒಬ್ಬಂಟಿಗ ನಾಗುತ್ತಾನೆ.

ಆ ಬ್ರಾಹ್ಮಣನು ತನ್ನ ಹೆಂಡತಿಯನ್ನೂ ಮಗ ನನ್ನೂ ಸಿಡಿಮಿಡಿಯಾಗಿ ಕೋಪಿಸುತ್ತ ಕರೆದುಕೊಂಡು ಹೋಗುವುದನ್ನು ನೋಡಿ, ಹರಿಶ್ಚಂದ್ರನು ಏನೂ ಮಾಡಲಾಗದೆ ಮಿಡುಕಿದನು. ಅವನ ಶೋಕಕ್ಕೆ ಮೇರೆ ಇಲ್ಲದಾಯಿತು.

ಹಾಗಿರುವಾಗ ವಿಶ್ವಾಮಿತ್ರನು ಅದೇ ವೃದ್ಧ ಬ್ರಾಹ್ಮಣ ರೂಪದಲ್ಲಿ ಬಂದು, "ಎಲ್ಲಿ ನನ್ನ ದಕ್ಷಿಣೆ?" ಎಂದು ಕೈ ನೀಡಿದನು.

ಹರಿಶ್ಚಂದ್ರನು ತನ್ನ ಮಗನನ್ನೂ, ಹೆಂಡತಿ ಯನ್ನೂ ಮಾರಿ ಬಂದ ಧನವನ್ನೆಲ್ಲಾ ವಿಶ್ವಾಮಿತ್ರನಿಗೆ ಕೊಟ್ಟನು. "ಒಂದು ಖಂಡೀ, ಮೇಲೆ ಕೊಸರಾ! ಪೂರ್ತಿ ಎಲ್ಲಿದೆ?" ಎಂದು ಕೇಳಿದ ವಿಶ್ವಾಮಿತ್ರ.

"ಇನ್ನೂ ಅಸ್ತಮನವಾಗಲಿಲ್ಲ. ಸ್ವಲ್ಪತಾಳಿರಿ" ಎಂದನು ಹರಿಶ್ಚಂದ್ರ. "ನೋಡುತ್ತೇನೆ" ಎಂದು ಬ್ರಾಹ್ಮಣನು ಹೊರಟು ಹೋದನು.

ಹರಿಶ್ಚಂದ್ರನು ತನ್ನನ್ನು ತಾನು ಮಾರಿಕೊಳ್ಳಲು ಸಿದ್ಧನಾದನು. ಅಷ್ಟರಲ್ಲಿ ವಿಕೃತಾಕಾರನಾದ ಚಾಂಡಾಲ ನೊಬ್ಬನು ಆ ದಾರಿಯಾಗಿ ಬಂದು ಹರಿಶ್ಚಂದ್ರ ನೊಂದಿಗೆ, "ನೋಡೋಯ್, ನಾನು ಪ್ರವೀರನೆಂಬ ಸ್ಮಶಾನಾಧಿಕಾರಿ. ನನ್ನ ಕೈ ಕೆಳಗೆ ಕೆಲಸ ಮಾಡು



ವಿಯಾ? ಶವಗಳ ಮೇಲಿನ ಬಟ್ಟೆಯನ್ನು ತೆಗೆಯುವುದು ಸ್ಮಶಾನ ಶುಲ್ಕ ವಸೂಲು ಮಾಡುವುದು ನಿನ್ನ ಕೆಲಸ. ನಾನು ಹೇಳುವ ಬೇರೆ ಕೆಲಸವನ್ನೂ ಒಮ್ಮೊಮ್ಮೆ ಮಾಡಬೇಕು" ಎಂದನು.

"ನಾನು ಬ್ರಾಹ್ಮಣ ಕ್ಷತ್ರಿಯರಿಗೆ ಮಾತ್ರವೇ ಮಾರಲ್ಪಡುತ್ತೇನೆ. ನಿನ್ನ ಚಾಕರನಾಗಲಾರೆನು" ಎಂದನು ಹರಿಶ್ಚಂದ್ರ.

"ಮಾರಲ್ಪಡುವೆನೆಂದು ಹೇಳಿ ಈಗ ಮಾತು ತಪ್ಪಿಸುವೆಯಾ? ಸುಳ್ಳುಗಾರನಿಗೆ ಎಷ್ಟೋ ನೆವನ ಗಳು!" ಎಂದನು ಪ್ರವೀರ.

ಸುಳ್ಳುಗಾರನೆನಿಸಿಕೊಳ್ಳುವುದಕ್ಕಿಂತಲೂ ಚಾಂಡಾಲನ ಸೇವೆಗೆ ತನ್ನನ್ನು ಮಾರಿಕೊಳ್ಳುವುದೇ ಒಳ್ಳೆಯದೆಂದು ಹರಿಶ್ಚಂದ್ರ ಮಹಾರಾಜನಿಗೆ ತೋರಿತು. ಅಷ್ಟರಲ್ಲಿ ಬ್ರಾಹ್ಮಣ ರೂಪದ ವಿಶ್ವಾ ಮಿತ್ರನು ಉಳಿದಿರುವ ತನ್ನ ದಕ್ಷಿಣೆಯನ್ನು ಕೇಳಲು



ಬಂದೇ ಬಂದು ಬಿಟ್ಟನು. ಹೊತ್ತು ಮುಳುಗಲು ಇನ್ನು ಹೆಚ್ಚು ಹೊತ್ತಿಲ್ಲ. ಈಗ ಹರಿಶ್ಚಂದ್ರನಿಗೆ ತನ್ನನ್ನು ಮಾರಿಕೊಳ್ಳಬೇಕಾದ ನಿರ್ಬಂಧವೇ ಬಂದಿತು. ಬೇರೆ ಉಪಾಯವಿರಲಿಲ್ಲ. ಅವನು ವಿಶ್ವಾಮಿತ್ರನ ಕಾಲಿಗೆ ಬಿದ್ದು "ಸ್ವಾಮಿ, ಇನ್ನೊಬ್ಬರೇಕೆ ? ನೀವೇ ನನ್ನನ್ನು ಕೊಂಡು ಕೊಂಡುಬಿಡಿ. ದಕ್ಷಿಣೆ ಪೂರ್ತಿ ಕೊಡುವೆನೆಂಬ ನನ್ನ ಮಾತನ್ನು ಉಳಿಸಲಿಕ್ಕಾಗಿ ನೀವೇ ನನ್ನನ್ನು ಕೊಂಡುಕೊಂಡು ನಿಮ್ಮಿಷ್ಟ ಬಂದಂತೆ ನನ್ನಿಂದ ಚಾಕರಿ ಮಾಡಿಸಿಕೊಳ್ಳಿ" ಎಂದು ಪ್ರಾರ್ಥಿಸಿದನು.

"ಹಾಗೇನು ? ಬಹಳ ಒಳ್ಳೇದಾಯಿತು, ಇನ್ನು ನೀನು ನನ್ನ ಸೊತ್ತು" ಎಂದು ವಿಶ್ವಾಮಿತ್ರನು ಪ್ರವೀರನೊಂದಿಗೆ, "ಇವನೀಗ ನನ್ನ ದಾಸ. ನನಗೆ ಇವನಿಂದ ಪ್ರಯೋಜನವೇನಿಲ್ಲ. ನನಗೆ ಹಣಬೇಕು. ನಿನಗೆ ಆಳು ಬೇಕು. ಆ ಹಣ ಕೊಟ್ಟು ನೀನು ಇವನನ್ನು ಕೊಂಡುಕೋ" ಎಂದನು.

ಪ್ರವೀರನು ಹಾಗೆಯೆ, ವಿಶ್ವಾಮಿತ್ರನು ಕೇಳಿದಷ್ಟು ಧನವನ್ನು ಕೊಟ್ಟು ಹರಿಶ್ಚಂದ್ರನನ್ನು ತನ್ನ ಸೇವಕ ನಾಗಿ ಕೊಂಡುಕೊಂಡನು. ಆಗ "ಮಾತು ತಪ್ಪದ ಹರಿಶ್ಚಂದ್ರ! ಸತ್ಯಹರಿಶ್ಚಂದ್ರ!" ಎಂದು ಆಕಾಶವಾಣಿ ಎಲ್ಲೆಲ್ಲಿಯೂ ಮೊಳಗಿತು! ಹರಿಶ್ಚಂದ್ರನಿಗೂ ಅವನ ಮಾಯೆಯು ಚಾಂಡಾಲನಿಗೂ ಅದಾವುದೂ ಕೇಳ ಲಿಲ್ಲ. ಚಾಂಡಾಲನು ಹರಿಶ್ಚಂದ್ರನನ್ನು ಕರೆದುಕೊಂಡು ಹೋಗಿ ಸ್ಮಶಾನದಲ್ಲಿ ಶವಗಳ ಮೇಲಿನ ಬಟ್ಟೆ ತೆಗೆಯಲು ನಿಯಮಿಸಿದನು.

ಊರಿನ ದಕ್ಷಿಣದಿಕ್ಕಿನಲ್ಲಿ ಸ್ಮಶಾನವಿದ್ದಿತು. ರಾತ್ರೀ ಹಗಲೂ ಶವಗಳು ಬರುತ್ತಾ ಇದ್ದುವು. ಅವುಗಳಿಗೆ ಹಣ ವಸೂಲು ಮಾಡಿ, ಶವಗಳ ಮೇಲಿನ ಬಟ್ಟೆ ತೆಗೆದು ದಹನಮಾಡುವುದು ಹರಿಶ್ಚಂದ್ರನ ಕೆಲಸ.

ಹೀಗಿರಲು ಬ್ರಾಹ್ಮಣನು ಕೊಂಡುಕೊಂಡ ಶೈಬ್ಯಳು, ಅಲ್ಲಿ ಚಾಕರಿ ಮಾಡುತ್ತಿರಲು, ರೋಹಿತನು ಯಜಮಾನನಿಗಾಗಿ ಸಮಿಧೆಗಳನ್ನು ತರಲು ಕಾಡಿಗೆ ಹೋದನು. ಆಗ ಅವನು ಒಂದು ಹುತ್ತದ ಮೇಲೆ ಕಾಲಿಟ್ಟು, ಹಾವಿನ ಕಡಿತದಿಂದ ಬಿದ್ದನು. ಆ ಸಂಗತಿ ಕೇಳಿ ಅಳುತ್ತಾ ಕುಳಿತ ಶೈಬ್ಯಳನ್ನು ನೋಡಿ, "ಅಷ್ಟು ಹಣ ಸುರಿದು ನಿನ್ನನ್ನು ಕೊಂಡುಕೊಂಡದ್ದು ಕೆಲಸ ಮಾಡಲಿಕ್ಕೋ ಅಳಲಿಕ್ಕೋ ! ಸಾಯಂಕಾಲ ಲಕ್ಷ್ಮಿ ಬರುವ ಹೊತ್ತಿನಲ್ಲಿ ಅಳುವೆಯಾ ?" ಎಂದು ಬೈದು ಕೂಗಾಡಿದನು.

ಅವಳು ಅರ್ಧರಾತ್ರಿಯವರೆಗೂ ಅಲ್ಲಿ ಕೆಲಸ ಮಾಡಿದ ಮೇಲೆ ಹೊರಡಲು ಸಾಧ್ಯವಾಯಿತು. "ಸತ್ತ ಮಗ ಅತ್ತರೆ ಬರುತ್ತಾನೆಯೆ ? ನನಗೂ ನೂರು ನಷ್ಟ ! ಹುಂ, ಬೇಗ ಹೋಗಿ ದಹನ ಮಾಡಿಸಿ ಬೆಳಗಾಗುವಷ್ಟರಲ್ಲಿ ಬಾ" ಎಂದು ಹೇಳಿ ಯಜ ಮಾನನು ಅವಳನ್ನು ಕಳುಹಿಸಿದನು.

ಅರ್ಧರಾತ್ರಿಯಲ್ಲಿ ಅವಳು ಮಗನನ್ನು ಹುಡು ಕುತ್ತಾ ಹೋಗಿ, ರೋಹಿತನ ಶವವನ್ನು ನೋಡಿ

ಎದೆಯೊಡೆಯುವಂತೆ ಅಳುತ್ತಾ ಕುಳಿತಳು. ಆಗ ವನ ಪಾಲಕಭಟರು ಬಂದು, "ರಾತ್ರಿಯಲ್ಲಿ ಮಕ್ಕಳನ್ನು ಕೊಂದು ತಿನ್ನುವ ಪಿಶಾಚಿ!" ಎಂದುಕೊಂಡು, ಅವಳನ್ನು ಕೂದಲು ಹಿಡಿದು ಎಳೆದುಕೊಂಡು ಹೋಗಿ ಸ್ಮಶಾನದ ಹತ್ತಿರವಿದ್ದ ಪ್ರವೀರನಿಗೆ ಅವಳನ್ನು ಒಪ್ಪಿಸಿ, "ಈ ರಕ್ಕಸಿಯನ್ನು ವಧಿಸು" ಎಂದರು. ಅವನು ಹರಿಶ್ಚಂದ್ರನನ್ನು ಕರೆದು ಅವನ ಕೈಗೆ ಕತ್ತಿಯನ್ನು ಕೊಟ್ಟು, ಅವಳನ್ನು ವಧಿಸಲು ಹೇಳಿದನು.

ಹರಿಶ್ಚಂದ್ರನು ಅವಳ ಗುರುತು ಹಿಡಿಯದೆ, "ನಿನ್ನ ತಲೆಕಡಿಯುತ್ತೇನೆ, ಸಿದ್ಧಳಾಗು" ಎಂದನು.

"ಅಯ್ಯಾ, ತುಸುತಾಳು. ನನ್ನ ಮಗ ಸತ್ತಿದ್ದಾನೆ. ಬೇಗ ಹೋಗಿ ಅವನನ್ನು ತಂದು ದಹನ ಮಾಡಿದ ಮೇಲೆ ತಲೆ ಕಡಿ" ಎಂದಳು ಶೈಬ್ಯ.

ಧರ್ಮ ಬುದ್ಧಿಯ ಹರಿಶ್ಚಂದ್ರನು ಅವಳನ್ನು ಹೋಗಲು ಬಿಟ್ಟನು. ಅವಳು ಹೋಗಿ ಮಗನ ಶವವನ್ನು ತಂದು ಅಳುತ್ತಾ ಕುಳಿತಳು. ಹರಿಶ್ಚದ್ರನು ತನ್ನ ವಿಧಿಯಂತೆ ಶವದ ಮೇಲಿನ ಬಟ್ಟೆಯನ್ನು ಎಳೆದುಕೊಂಡನು.

ಈಗ ತನ್ನ ಹೆಂಡತಿಯ ಹಾಗು ಮಗನ ಗುರುತು ಹಿಡಿದು ಹರಿಶ್ಚಂದ್ರನು ದುಃಖವನ್ನು ತಾಳಲಾರದವನಾದನು. ಶೈಬ್ಯಳಿಗೂ ಅವನು ತನ್ನ ಪತಿಯೆಂದು ತಿಳಿಯಿತು. ಕಡೆಗೆ ತಮ್ಮ ಗತಿ ಹೇಗಾಯಿತೆಂದು ಇಬ್ಬರಿಗೂ ತಿಳಿಯಿತು. ಹರಿಶ್ಚಂದ್ರನು ಮಗನ ಶವವನ್ನು ಅಪ್ಪಿ ಹಿಡಿದು ಮೂರ್ಛೆ ಹೋದನು.

ತನ್ನಂತೆ ಮೂರ್ಛೆ ತಿಳಿದೆದ್ದ ಮೇಲೆ ಶೈಬ್ಯಳು ನಡೆದ ಸಂಗತಿಯನ್ನೆಲ್ಲಾ ಗಂಡನೊಂದಿಗೆ ಹೇಳಿದಳು. ಹರಿಶ್ಚಂದ್ರನು ಹೆಂಡತಿಯೊಂದಿಗೂ ಮಗನೊಂದಿಗೂ ಚಿತೆಯಲ್ಲಿ ಹಾರುವುದೆಂದು ನಿಶ್ಚಯಿಸಿ ಅದರ ಮೇಲೆ ಮಗನ ಶವವನ್ನು ಮಲಗಿಸಿದಾಗ, ಅವನ ಮನಸ್ಸಿನಲ್ಲಿ ಮಿಂಚಿನಂತೆ ಮಹಾದೇವಿ ಮಿಂಚಿ ನಗುತ್ತಾ, ಇದೆಲ್ಲಾ ತಾನು ಆಡಿಸಿದ ಆಟವೆಂದೂ, ವಸಿಷ್ಠ ವಿಶ್ವಾಮಿತ್ರರ ಅಹಂಕಾರಕ್ಕೆ ಪಾಠ ಕಲಿಸಲು "ನಿನ್ನನ್ನು ಪುಟಹಾಕಬೇಕಾಯಿತೆಂ"ದೂ ಹೇಳಿ ಏನೋ ಸೈಗೆ ತೋರಿಸಿ ಮಾಯವಾದಳು. ಕೂಡಲೇ ಇಂದ್ರನು ದೇವತೆಗಳೊಂದಿಗೆ ಅಲ್ಲಿ ಪ್ರತ್ಯಕ್ಷನಾದನು. ಅಮೃತವರ್ಷದಿಂದ ರೋಹಿತನು ಎದ್ದನು. ಚಾಂಡಾಲನು ಯಮನಾಗಿ ನಿಂತನು. ಇಂದ್ರನು ಹರಿಶ್ಚಂದ್ರನೊಂದಿಗೆ, "ಸತ್ಯ ಹರಿಶ್ಚಂದ್ರಾ! ನಿನ್ನ ಕೀರ್ತಿ ಅಜರಾಮರ! ರೋಹಿತನಿಗೆ ಪಟ್ಟಾಭಿಷೇಕ ಮಾಡಿ ಸ್ವರ್ಗಕ್ಕೆ ಬರುವೆಯಂತೆ. ಈಗ ಅತಿಥಿಯಾಗಿ ನಮ್ಮೊಂದಿಗೆ ಪತ್ನೀ ಸಮೇತನಾಗಿ ಬಾ" ಎಂದು ತನ್ನೊಂದಿಗೆ ಕರೆದುಕೊಂಡು ಹೋದನು. ವಿಶ್ವಾಮಿತ್ರನು ವಸಿಷ್ಠನ ಮುಂದೆ ತಲೆ ತಗ್ಗಿಸಲು, ವಸಿಷ್ಠನು ತನ್ನದೂ ತಪ್ಪಿದೆ ಎಂದುಕೊಂಡು ಸುಮ್ಮನಿದ್ದನು. —(ಸಂಪೂರ್ಣ)





# ತಂತ್ರದ ಮೇಲೆ ತಂತ್ರ

**ಒಂ**ದು ಊರಿನಲ್ಲಿ ಮುತ್ತಯ್ಯನೆಂಬ ಬಡವನಿದ್ದನು. ಹೇಗೆ ಹೇಗೋ ಮಾಡಿದ ಮೇಲೆ ಅವನ ಮಗಳಿಗೆ ಮದುವೆ ನಿಶ್ಚಯವಾಯಿತು. ಅದಕ್ಕಾಗಿ ಅವನು ಹೊಟ್ಟೆ ಕಟ್ಟಿಕೊಂಡು ಸೇರಿಸಿಟ್ಟ ಹಣವನ್ನು ತೆಗೆದು ಕೊಂಡು ನಗರಕ್ಕೆ ಹೋಗಿ ಬೆಳ್ಳಿ ಬಂಗಾರಗಳ ನಗ ಗಳ ಅಂಗಡಿಗಳಲ್ಲಿ ತನಗೆ ಬೇಕಾದ ನಗವನ್ನು ಹುಡುಕಿದನು. ಕಡೆಗೆ ವಜ್ರ ಭಂಡಾರಿಯ ಅಂಗಡಿ ಯಲ್ಲಿ ಬೇರೆ ಎಲ್ಲ ಕಡೆಗಳಿಗಿಂತಲೂ ಕಡಿಮೆ ದರದಲ್ಲಿ ಸಿಕ್ಕುವುದರಿಂದ ಸಂತೋಷಪಟ್ಟು, ಅಲ್ಲಿಯೇ ತನಗೆ ಬೇಕಾದ ಒಂದು ನಗವನ್ನು ಕೊಂಡುಕೊಂಡನು.

ಅವನು ತನ್ನ ಚಿಂದಿ ಬಟ್ಟೆಗಳ ಎಡೆಯಲ್ಲಿ ಆ ನಗವನ್ನು ಮರೆಸಿಟ್ಟುಕೊಂಡು ತನ್ನ ಗ್ರಾಮಕ್ಕೆ ಹೋಗುತ್ತಿರುವಾಗ, ದಾರಿಯಲ್ಲಿ ಮೂವರು ಮನುಷ್ಯರು ದೊಣ್ಣೆಗಳೊಂದಿಗೆ ಅಡ್ಡ ಬಂದು, "ಲೋ, ನಿನ್ನ ಹತ್ತಿರ ಇರುವುದನ್ನೆಲ್ಲಾ ಹೊರಗೆ ತೆಗಿ, ಇಲ್ಲದಿದ್ದರೆ ತಲೆ ಒಡೆಯುತ್ತೇವೆ" ಎಂದರು.

ಮುತ್ತಯ್ಯನು ಬೆರಗಾಗಿ, "ನನ್ನಂಥಾ ಬಡವನ ಹತ್ತಿರ ಏನಿದೆ ಅಪ್ಪಗಳಿರಾ? ನನ್ನನ್ನು ಹೋಗಲು ಬಿಡಿ" ಎಂದನು ದೀನತೆಯಿಂದ. ಮೊದಲು ಮಾತಾಡಿದವನೇ ಮುತ್ತಯ್ಯನ ಹೆಗಲಿನ ಮೇಲೆ ದೊಣ್ಣೆಯನ್ನು ಆನಿಸಿ, "ನಿನ್ನ ಬಟ್ಟೆಯ ಮರೆಯಲ್ಲಿ ಅಡಗಿಸಿಕೊಂಡ ನಗವನ್ನು ಹೊರಗೆ ತೆಗಿ!" ಎಂದನು.

ಮುತ್ತಯ್ಯ ಬೆವರಿ ಮುದ್ದೆಯಾದನು. ತನ್ನ ಕಷ್ಟಾರ್ಜಿತವೆಲ್ಲವೂ ಆ ನಗದಲ್ಲಿದೆ. ಆದರ ಸಂಗತಿ ಈ ಕಳ್ಳರಿಗೆ ಹೇಗ ಗೊತ್ತಾಯಿತೋ!

ಅವನು ಜೀವದಾಶೆ ಬಿಡಲಾಗದೆ, ದೇವರೇ ಎಂದುಕೊಳ್ಳುತ್ತ ನಗವನ್ನು ತೆಗೆದು ಆ ಕಳ್ಳರಿಗೆ ಕೊಟ್ಟನು. ಕಳ್ಳರು ಅದನ್ನು ತೆಗೆದುಕೊಂಡು ಹೊರಟು ಹೋದರು.

ಹೀಗೆ ನಗ ಹೋದ ಮೇಲೆ ಮುತ್ತಯ್ಯನ ಮಿದುಳು ವೇಗವಾಗಿ ತಿರುಗತೊಡಗಿತು. ತನ್ನ ಚಿಂದಿ ಬಟ್ಟೆಯ ಮರೆಯಲ್ಲಿ ನಗವಿರುವ ಸಂಗತಿ ಅವರಿಗೆ ಹೇಗೆ ತಿಳಿಯಿತು? ತನ್ನನ್ನು ಮಾತಾಡಿಸಿ ದವನನ್ನು ತಾನು ವಜ್ರಭಂಡಾರಿಯ ಅಂಗಡಿಯಲ್ಲಿ ನೋಡಿದಂತೆ ಮುತ್ತಯ್ಯನಿಗೆ ನೆನಪಾಯಿತು. ಅವನು ಅಂಗಡಿಯ ಮೆಟ್ಟಲಿಳಿದು ಹೊರಗೆ ಹೋಗುವಾಗಲೇ ತಾನು ಅಂಗಡಿಯ ಮೆಟ್ಟಲು ಏರಿದ್ದು ಎಂಬುದೂ ನೆನಪಿಗೆ ಬಂತು.

ವಿ. ಎಸ್. ನಾರಾಯಣ



ಕೊಡುವುದನ್ನು ಮುತ್ತಯ್ಯನು ಅವರಿಗೆ ತಿಳಿಯದಂತೆ ಮರೆಯಲ್ಲಿದ್ದು ನೋಡಿದನು.

ಇಷ್ಟು ನೋಡಿದ ಮೇಲೆ ಅವನ ಹೊಟ್ಟೆ ಉರಿಯತೊಡಗಿತು. ವಜ್ರಭಂಡಾರಿ ಆ ಮನುಷ್ಯರ ಮೂಲಕ ತನ್ನಿಂದ ನಗಗಳನ್ನು ಪಡೆದವರನ್ನೇ ದಾರಿ ಹೊಡೆಸಿ ದೋಚಿಸುತ್ತಾನೆ. ಅದಕ್ಕೇ ಅವನ ಅಂಗಡಿಯಲ್ಲಿ ಬೆಲೆ ಕಡಿಮೆ. ಈ ದುರನ್ಯಾಯ ವನ್ನು ಅಧಿಕಾರಿಗಳಿಗೆ ತಿಳಿಸಿ ನಂಬಿಸುವ ಕೆಲಸ ಸುಲಭವೇನಲ್ಲ. ಅದಲ್ಲದೆ ಯಾರಿಗೆ ಗೊತ್ತು? ಅಧಿಕಾರಿಗಳನ್ನೂ ಈ ಭಂಡಾರಿ ಲಂಚಕೊಟ್ಟು ಕೊಂಡುಕೊಂಡಾನು! ಇಂಥವನನ್ನು ತಪ್ಪು ಮಾಡು ವಾಗಲೇ ಹಿಡಿಯಬೇಕಲ್ಲದೆ ಕೇವಲ ದೂರು ಹೇಳಿದರೆ ಏನೂ ನಡೆಯದು. ಹೀಗೆ ನೆನೆಯುವಾಗ ಒಂದು ಉಪಾಯ ಮಿಂಚಿತು ಮುತ್ತಯ್ಯನಿಗೆ.

ಆ ಉಪಾಯ ಮಿಂಚಲು ಕಾರಣ ತನ್ನಂತಹ ರೈತನೊಬ್ಬ ಆ ಅಂಗಡಿಯೊಳಗೆ ಪ್ರವೇಶಿಸುವುದನ್ನು ನೋಡಿದುದೇ. ಕೂಡಲೇ ಮುತ್ತಯ್ಯ ಮೆಲ್ಲನೆ ಆ ಅಂಗಡಿಗೇ ಹೊಕ್ಕು ಅಲ್ಲಿರುವ ಜನರೊಂದಿಗೆ ಸೇರಿ ಆ ರೈತನನ್ನೂ, ವಜ್ರಭಂಡಾರಿಯನ್ನೂ ಗಮನಿಸ ತೊಡಗಿದನು.

ವಜ್ರಭಂಡಾರಿ ಆ ರೈತನಿಗೆ ಯಾವುದೋ ನಗ ವನ್ನು ಬೆಲೆ ನಿರ್ಣಯಿಸಿ ಕೊಡುತ್ತ, ತನ್ನ ಹತ್ತಿರ ಕೇಳಿದ ಹಾಗೆಯೇ, "ನಿಮ್ಮದು ಯಾವ ಊರು? ಸೀದಾ ಅಲ್ಲಿಗೇ ಹೋಗುವಿರಾ? ನಡೆದು ಹೋಗು ವಿರಿ, ಜಾಗ್ರತೆ! ಕತ್ತಲಾಗುವುದರೊಳಗೆ ಊರು ಸೇರಿ ಕೊಳ್ಳಿ" ಎಂದು ಸಹಾನು ಭೂತಿಯಾದ ಮಾತು ಹೇಳಿದನು.

ಅಂಗಡಿ ಯಜಮಾನನು ಬಹಳ ಒಳ್ಳೆಯವನೆಂದು ಕೊಂಡು ಆ ರೈತನು, ಸತ್ಯವನ್ನೇ ಹೇಳಿ ಅಲ್ಲಿಂದ ಹೊರಟನು. ಅವನು ಬೀದಿಗೆ ಬಂದ ಮೇಲೆ ಮುತ್ತಯ್ಯನನ್ನು ಅಡ್ಡ ಗಟ್ಟಿದ ಮೂವರೂ ಸ್ವಲ್ಪ

ಆಮೇಲೆ ಮುತ್ತಯ್ಯ ಊರಿಗೆ ಹೋಗುವುದನ್ನು ಬಿಟ್ಟು ಮತ್ತೆ ನಗರಕ್ಕೇ ತಿರುಗಿದನು. ಅವನು ಅದೇ ವಜ್ರ ಭಂಡಾರಿಯ ಅಂಗಡಿಯನ್ನು ಸಮೀಪಿಸಿ ದಾಗ, ತನ್ನ ನಗವನ್ನು ಸುಲಿದುಕೊಂಡ ಮೂವರೂ ಆ ಅಂಗಡಿಯ ಹೊರಗೆ ನಿಂತಿರುವುದನ್ನು ನೋಡಿ ದನು. ಒಮ್ಮೆಗೇ "ಕಳ್ಳರು ಕಳ್ಳರು" ಎಂದು ಅರಚಿಕೊಳ್ಳೋಣವೆನಿಸಿತು. ಆದರೆ ಈ ನಗರದಲ್ಲಿ ತನ್ನಂತಹ ಅನಾಮಧೇಯನ ಮಾತನ್ನು ಯಾರು ಕೇಳುವರೆಂಬ ಅಧೈರ್ಯವುಂಟಾಯಿತು. ತಾನು ಹೇಳುವ ನಿಜವನ್ನು ನಿರೂಪಿಸುವ ಬಗೆಯಾದರೂ ಹೇಗೆ? ಸಾಕ್ಷಿಗಳಾರು?

ಆ ಮೂವರಲ್ಲಿ ಮುತ್ತಯ್ಯನ ಕೈಯಿಂದ ನಗವನ್ನು ಎಳೆದುಕೊಂಡವನು ಅಂಗಡಿಯೊಳಗೆ ಹೋದನು. ಮತ್ತೆ ಸ್ವಲ್ಪ ಹೊತ್ತಿನಲ್ಲಿ ಅವನು ಕೈಯಲ್ಲಿ ಹಣವನ್ನು ಹಿಡಿದುಕೊಂಡು ಹಣದೊಂದಿಗೆ ಹೊರಗೆ ಬಂದು, ತಾನು ತಂದ ಹಣವನ್ನು ಉಳಿದ ಇಬ್ಬರಿಗೆ ಹಂಚಿ

ದೂರದಲ್ಲಿ ಆ ರೈತನ ಹಿಂದೆ ನಡೆದು ನಗರದ ಕೊನೆಯಲ್ಲಿ ಅಡ್ಡದಾರಿ ಹಿಡಿದರು. ಅಂದರೆ ಅವರು ಆ ರೈತನಿಗಿಂತ ಮುಂದಾಗಿ ಹೋಗಿ ಅವನ ದಾರಿ ಯಲ್ಲಿ ಹೊಂಚುವರೆಂದು ಮುತ್ತಯ್ಯನು ತಿಳಿದು ಕೊಂಡನು. ಕೂಡಲೇ ಮುತ್ತಯ್ಯ ಆ ರೈತನನ್ನು ಸಂಧಿಸಿ ತಾನು ಯಾರು ಏನೆಂಬುದನ್ನೆಲ್ಲಾ ಹೇಳಿ ತನ್ನ ನಗ ಅಪಹರಿಲ್ಪಟ್ಟ ವಿಧವನ್ನೂ ತಿಳಿಸಿದನು. ಅದೃಷ್ಟ ವಶಾತ್ ಆ ರೈತನ ಊರಿನಲ್ಲಿ ಮುತ್ತಯ್ಯನ ಬಂಧು ಗಳಿದ್ದರು. ಅವರ ಗುರುತು ಆ ರೈತಗಿದ್ದಿತು.

"ಅಣ್ಣಾ, ನೀನು ಕೊಂಡುಕೊಂಡ ನಗವನ್ನು ಕೂಡಾ ಆ ಭಂಡಾರಿಯ ಮನುಷ್ಯರು ದೋಚಿ ಕೊಳ್ಳುತ್ತಾರೆ. ಇದಕ್ಕೆ ಬದಲಾಗಿ ನಕಲೀ ನಗ ವೊಂದನ್ನು ಕೊಂಡು ಕೊಂಡು, ದಾರಿ ಹೊಡಕರು ಬಂದಾಗ ಅದನ್ನು ಅವರಿಗೆ ಕೊಡು. ನಿನ್ನ ಅಸಲು ನಗ ಅವರ ಕಣ್ಣಿಗೆ ಬೀಳದಂತೆ ನೋಡಿಕೋ. ಆಮೇಲೆ ಅವರ ಸಂಗತಿ ನಾನು ನೋಡಿಕೊಳ್ಳು ತ್ತೇನೆ" ಎಂದನು ಮುತ್ತಯ್ಯ.

"ಅಸಲು ನಗ ನಿನ್ನ ಹತ್ತಿರವೇ ಇರಲಿ. ಕಳ್ಳರು ಸಿಕ್ಕಿಬಿದ್ದ ಮೇಲೆ ತೆಗೆದುಕೊಳ್ಳುತ್ತೇನೆ" ಎಂದು ರೈತನು ತಾನು ಕೊಂಡುಕೊಂಡ ಬಂಗಾರದ ನಗವನ್ನು ಮುತ್ತಯ್ಯನಿಗೆ ಕೊಟ್ಟು, ಅಗ್ಗದಲ್ಲಿ ಒಂದು, ಗಿಲೀಟ ನಗವನ್ನು ಕೊಂಡು ಕೊಂಡು ತನ್ನದಾರಿ ಹಿಡಿದು ನಡೆದನು.

ಮುತ್ತಯ್ಯ ವಜ್ರಭಂಡಾರಿಯ ಅಂಗಡಿಗೆ ಹೋಗಿ ಅಳುಮೋರೆ ಮಾಡಿಕೊಂಡು, "ಅಯ್ಯಾ, ನಾನು ಆವಾಗ ನಿಮ್ಮ ಹತ್ತಿರ ಒಂದು ನಗ ತೆಗೆದುಕೊಂಡು ಹೋದೆನಷ್ಟೇ? ಅದನ್ನೂ, ನಮ್ಮ ಗ್ರಾಮದ ಇನ್ನೊಬ್ಬರು ಕೊಟ್ಟಿದ್ದ ಒಂದು ಬಂಗಾರದ ಅವಲಕ್ಕಿ ಸರವನ್ನೂ ದಾರಿಯಲ್ಲಿ ಮೂವರು ಕಳ್ಳರು ದೋಚಿ ಕೊಂಡರು. ಊರಿಗೆ ಹೋಗಲಿಕ್ಕೇ ಮುಖವಿಲ್ಲ ದಾಗಿದೆ, ಆ ಕಳ್ಳರಲ್ಲಿ ಒಬ್ಬನನ್ನು ನಿಮ್ಮ ಅಂಗಡಿ ಯಲ್ಲಿ ನೋಡಿದ್ದೇನೆ. ಅವನ ಸಂಗತಿ ನಿಮಗೇ ನಾದರೂ ಗೊತ್ತಾ? ಕದ್ದ ನಗಗಳನ್ನು ಇಲ್ಲಿಗೇ ನಾದರೂ ಮಾರಲಿಕ್ಕೆ ತಂದನೇ ಅಂತ ಕೇಳಲು



ಬಂದೆ." ಎಂದನು. ಅವನು ಹಾಗೆ ಹೇಳಿದುದನ್ನು ಕೇಳಿ ತನ್ನ ಮನುಷ್ಯರು ಬಂಗಾರದ ಹಾರವನ್ನು ಕದ್ದ ಸಂಗತಿ ಹೇಳದೆ ಅಡಗಿಸಿ ಕೊಂಡರೆಂದು ವಜ್ರಭಂಡಾರಿಗೆ ತೋರಿತು. ಅವರು ತನಗೆ ತಿಳಿಯದಂತೆ ಹೀಗೂ ವ್ಯಾಪಾರ ಮಾಡುವರೆಂದು ಅವನು ಕಳವಳಪಡು ತ್ತಿರಲು, ಮುತ್ತಯ್ಯನು ಮತ್ತೆ ಹೀಗೆಂದನು :

"ಅಷ್ಟೇ ಅಲ್ಲ ಅಯ್ಯಾ ! ಅವರು ಕದ್ದುಕೊಂಡ ನಗಗಳನ್ನು ಇನ್ನೆಲ್ಲೋ ಮಾರುತ್ತಾರಂತ ಕಾಣುತ್ತದೆ. ಬಂಗಾರದ ಹಾಗೇ ಕಾಣುವ ಮಾಯದ ನಗಗಳನ್ನು ನಾನು ನೋಡಿದ್ದೇನೆ. ನಮ್ಮೂರ ಕೆಲವರು ಮೋಸ ಹೋಗಿದ್ದಾರೆ ! ಅದೂ ಇವರ ಕೆಲಸವೋ ಏನೋ"

"ಏನೋ ಅಪ್ಪ ! ಇಲ್ಲಿಗೆ ಯಾರೂ ಬಂದಿಲ್ಲ. ನನಗೇನೂ ಗೊತ್ತಿಲ್ಲ. ಅವರವರ ಜಾಗ್ರತೆ ಅವ ರವರಿಗೆ ಬೇಕು. ನೀನು ಹೋಗಬಹುದು" ಎಂದು ವಜ್ರಭಂಡಾರಿ ಮುತ್ತಯ್ಯನನ್ನು ಕಳುಹಿಸಿ, ತನ್ನ ಕಳ್ಳರಿಗಾಗಿ ಇದಿರು ನೋಡತೊಡಗಿದನು.

ಸ್ವಲ್ಪ ಹೊತ್ತಿನೊಳಗೆ ಕಳ್ಳರು ರೈತನಿಂದ ದೋಚಿ ಕೊಂಡ ಗಿಲೀಟು ನಗವನ್ನು ತಂದು ವಜ್ರಭಂಡಾರಿಗೆ ಕೊಟ್ಟರು. ವಜ್ರಭಂಡಾರಿ ಅದನ್ನು ನೋಡಿ, ಮುತ್ತಯ್ಯ ಹೇಳಿದಂತೆಯೇ ಅದು ಮಾಯದ ನಗ ವೆಂದು ಕಂಡು ಹಿಡಿದು, ಮಹಾಕೋಪದಿಂದ, "ಅಸಲು ನಗವೆಲ್ಲಿದೆ ?" ಎಂದು ಕೇಳಿದನು.

ಕಳ್ಳರು ಮುಖ ಮುಖ ನೋಡಿಕೊಂಡರು.

"ಇದಕ್ಕೆ ಮೊದಲು ಇನ್ನೊಬ್ಬನ ಹತ್ತಿರ ಬಂಗಾರದ ಅವಲಕ್ಕಿ ಸರ ಕೂಡಾ ಕದ್ದಿದ್ದೀರಿ. ಅದೆಲ್ಲಿದೆ ? ಅದನ್ನು ಕೂಡಾ ನನಗೇ ಕೊಟ್ಟರೆ ಹಣ ಕೊಡದೇ ಹೋಗುವೆನೇ ?" ಎಂದನು ವಜ್ರ ಭಂಡಾರಿ. "ಅವಲಕ್ಕೀ ಸರವೇ ?" ಎಂದು ಕಳ್ಳರು ಬೆರಗಾದರು.

ಅದೇ ಸಮಯದಲ್ಲಿ ಮುತ್ತಯ್ಯ ರಾಜಾಧಿಕಾರಿ ಯನ್ನೂ ರಕ್ಷಕಭಟರನ್ನೂ ಕರೆದುಕೊಂಡು ಅಲ್ಲಿಗೆ ಬಂದನು. ಅದುವರೆಗೂ ಬೀದಿಯಲ್ಲಿ ಅವರಿಗಾಗಿ ಇದಿರುನೋಡಿಕೊಂಡಿದ್ದ ರೈತನು ಕೂಡಾ ಅಂಗಡಿ ಯೊಳಗೆ ಬಂದನು.

ಕಳ್ಳರು ಸಿಕ್ಕಿಬಿದ್ದರು. ಮುತ್ತಯ್ಯನು ರೈತನ ನಗವನ್ನು ರೈತನಿಗೆ ಕೊಟ್ಟನು. ಕಳ್ಳರು ದಾರಿಯಲ್ಲಿ ಅಡ್ಡಗಟ್ಟಿ ತನ್ನಿಂದ ಆ ಗಿಲೀಟು ನಗ ಅಪಹರಿಸಿದ ರೀತಿಯನ್ನು ರೈತನು ಅಧಿಕಾರಿಯೊಡನೆ ಹೇಳಿದನು ಆ ಗಿಲೀಟು ನಗ ವಜ್ರಭಂಡಾರಿಯ ಕೈಯಲ್ಲೇ ಇದೆ !

ವಿಚಾರಣೆಯಲ್ಲಿ ಮುತ್ತಯ್ಯನಿಗೆ ಅವನ ನಗವು ಹಿಂದಿರುಗಿ ಸಿಕ್ಕಿತು. ಕಳ್ಳರನ್ನು ಹಿಡಿಸಿಕೊಟ್ಟುದಕ್ಕೆ ಬಹುಮಾನವಾಗಿ ಅದರ ಬೆಲೆಯೂ ತಿರುಗಿ ಬಂದಿತು. ಕಳ್ಳರೂ ವಜ್ರಭಂಡಾರಿಯೂ ರಾಜಭಟರ ಅತಿಥಿ ಗಳಾಗಿ ತಲೆತಗ್ಗಿಸಿಕೊಂಡು ಹೋದರು.



# ಅನುಭವ

ವೇಂಗಿವಾಡವೆಂಬ ದೇಶದಲ್ಲಿ ಒಂದು ವಿಶೇಷ ಆಚಾರವಿದ್ದಿತು. ರಾಜನ ತಂದೆಯದೋ ತಾತನದೋ ಶ್ರಾದ್ಧದ ದಿನ ರಾಜ್ಯದಲ್ಲಿರುವ ಒಂದು ಮನೆಯ ಮನುಷ್ಯನಿಗೆ ರಾಜನಾಗಿರುವ ಅವಕಾಶ ಬರುತ್ತಿತ್ತು. ಅದಕ್ಕಾಗಿ ಚೀಟಿ ಎತ್ತುವರು.

ಒಂದು ವರ್ಷ ಆ ಅವಕಾಶವು ಒಬ್ಬ ರೈತನ ಮನೆಗೆ ಬಂದಿತು. ಆ ಮನೆಯಲ್ಲಿ ರೈತನೂ ಅವನ ಹೆಂಡತಿಯೂ ಮಗ ಜಯರಾಮನೂ ಇದ್ದರು. ಅವರಲ್ಲಿ ಯಾರಾದರೂ ಆ ದಿನ ರಾಜನಾಗಬಹುದು. ರೈತನೇ ಆ ಅವಕಾಶವನ್ನು ವಿನಿಯೋಗಿಸಿಕೊಂಡನು. ಅವನ ಹೆಂಡತಿಗೂ ಜಯರಾಮನಿಗೂ ಅವಕಾಶವಿಲ್ಲದೆ ಹೋಯಿತು.

ಮರುವರ್ಷದಲ್ಲಿ ಕೂಡಾ ಅದೇ ಮನೆಗೇ ರಾಜನನ್ನು ಕಳುಹಿಸಬೇಕಾದ ಅವಕಾಶ ಬಂತು. ಈಸಾರಿ ರೈತನ ಹೆಂಡತಿ ಆ ಅವಕಾಶವನ್ನು ವಿನಿಯೋಗಿಸಿಕೊಂಡಳು. ಜಯರಾಮನ ಆಶೆ ಈಸಾರಿ ಕೂಡಾ ನೆರವೇರಲಿಲ್ಲ.

ಆಮೇಲೆ ಇಪ್ಪತ್ತು ವರ್ಷಗಳು ಕಳೆದುವು. ಜಯರಾಮನು ಮದುವೆಯಾಗಿ ಒಬ್ಬ ಮಗನನ್ನೂ ಪಡೆದು, ಮಗನೂ ದೊಡ್ಡವನಾದನು. ಆಕಸ್ಮಿಕವಾಗಿ ರಾಜನಾಗುವ ಅವಕಾಶ ಮತ್ತೊಂದು ಸಾರಿ ಜಯರಾಮನ ಮನೆಗೇ ಬಂದಿತು. ಜಯ ರಾಮನು ತಲೆಗೆ ಜರಿಪೇಟಾ, ಒಳ್ಳೆಯ ರಾಜಭೂಷಣಗಳನ್ನು ಧರಿಸಿಕೊಂಡು ಆ ದಿನ ರಾಜನಾಗಲು ಹೊರಟನು.

ಹಾಗೆ ಹೊರಟ ಜಯರಾಮನು ಎರಡು ನಿಮಿಷಗಳಲ್ಲಿ ತಿರುಗಿಬಂದು, ತನ್ನ ವೇಷಭೂಷಣಗಳನ್ನು ಬಿಚ್ಚುವಾಗ, ಅವನ ಹೆಂಡತಿ ಇದೇನೆಂದು ಕೇಳಿದಳು. "ಮಗನೇ ಹೋಗಲಿ!" ಎಂದನು ಜಯರಾಮ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೧ ಮಾರ್ಚಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**



P. V. Subramaniam





Pranlal K. Patel

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಜನವರಿ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

## ನವೆಂಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: **ಕುಣಿದು ತರುವವಳು ತಂಗಿ**

ಎರಡನೇ ಫೋಟೋ : **ಬೇಯಿಸಿ ಬಡಿಸುವವಳು ಅಕ್ಕ**

ಕಳುಹಿಸಿದವರು : **ಹೆಚ್. ಗಣೇಶ,**

**ಕೆ. ಪಿ. ಟಿ. ಮಂಗಳೂರು-೪,**

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188. Arcot Road, Madras-600 026 (India). Controlling Editor: NAGI REDDI.

ನನ್ನ ಜನ್ಮದಿನಕ್ಕೊಂದು
ಹೊಸ ಪುಸ್ತಕ

ಅದೊಂದು
**ಯೂಕೊಬ್ಯಾಂಕ್**
ಪಾಸ್ ಬುಕ್



ಹಲವಾರು ಉಪಹಾರಗಳನ್ನು ತರಬಲ್ಲ
ಒಂದು ಉಪಹಾರ. ಅದು ಯಾವುದು
ಗೊತ್ತೇ? ನನ್ನ ಯೂಕೊಬ್ಯಾಂಕ್
ಪಾಸ್ ಬುಕ್

ಅಮ್ಮಾ, ನಿನ್ನ ಈ ಸುವಿಚಾರಕ್ಕಾಗಿ
'ಧನ್ಯವಾದಗಳು'. ನನ್ನ ಅಲ್ಪ
ಉಳಿತಾಯವನ್ನು ಬಹುಗುಣ
ವಾಗಿಸಿದ್ದಕ್ಕೆ ಯೂಕೊಬ್ಯಾಂಕ್,
"ನಿನಗೂ ಧನ್ಯವಾದಗಳು."

UCO/CAS-69/80 KAN




**ಯುನೈಟೆಡ್ ಕಮರ್ಶಿಯಲ್ ಬ್ಯಾಂಕ್**

ಅಕ್ಕಪಕ್ಕದಲ್ಲಿರುವ ಸೌಕರ್ಯ ನೀಡುವ ಬ್ಯಾಂಕ್

ಈಗೊಂದು ಸಿಹಿ ವಿಸ್ಮಯ

# ನ್ಯೂಟ್ರಿನ್

ಲಿಕೇರ್‌ಗಳು

ಸಿಹಿ ಮಾತ್ರವಲ್ಲವಿದು ಮನ ನಲಿವ ಮೃದುವೂ
ನ್ಯೂಟ್ರಿನ್ ಸೃಷ್ಟಿಸಿದ ಹೊಸಬಗೆಯ ರುಚಿಯು




ಪ್ರತಿನಿತ್ಯವು ಮಿಠಾಯಿ ರಸದೌತಣವಂ ಬಾಯಿ!

ನ್ಯೂಟ್ರಿನ್ ಕನ್‌ಫೆಕ್ಷನರಿ ಕಂಪನಿ ಲಿಮಿಟೆಡ್. ಚಿತ್ತೂರು-517 002 (ಆಂಧ್ರಪ್ರದೇಶ್)

CAS NC 47/80KN B

# ನಿಮ್ಮ ನೆಚ್ಚಿನ ಬಿಸ್ಕಿಟ್‌ಗಳ ನಕಲು ಮಾಡುವವರನ್ನು ಹಿಡಿಯುವುದು ಒಂದು ಮಕ್ಕಳಾಟ

ಪಾರ್ಲೆ

**ಅಕ್ಷರ ಸಂಯೋಜನೆ ಪರೀಕ್ಷಿಸಿರಿ** P-A-R-L-E

ನಮ್ಮನ್ನು ನಕಲು ಮಾಡುವವರು P-A-R-L-E ಶಬ್ದದ ಸಂಯೋಜನೆಯಲ್ಲೇ ಮೋಸಗೊಳಿಸುತ್ತಾರೆ. ಹೀಗೆ: P-E-R-L-E ಅಥವಾ P-E-A-R-L ಇದಲ್ಲದೆ G-L-U-C-O ಶಬ್ದವನ್ನು G-L-U-C-O-S-E ಎಂದು ಬರೆಯುತ್ತಾರೆ.

ವರ್ಲ್ಡ್ ಸಿಲೆಕ್ಷನ್ ಅವಾರ್ಡ್‌ನ ವಿಜಯಿ

**ಯಾವಾಗಲೂ ನೆನಪಿನಲ್ಲಿಡಿರಿ**

ಪಾರ್ಲೆ ಮೊನೆಕೊ ಮತ್ತು ಕ್ರಾಕ್‌ಜಾಕ್ ಬಿಸ್ಕಿಟ್‌ಗಳು ಬಿಡಿಬಿಡಿಯಾಗಿ ಎಂದೂ ಮಾರಲ್ಪಡುವುದಿಲ್ಲ. ಫ್ಯಾಕ್ಟರಿಯಲ್ಲಿ ಸೀಲ್‌ಗೊಂಡ ವಾತಾನುರೋಧಿ ಪ್ಯಾಕ್‌ನಲ್ಲಿ ದೊರೆಯುತ್ತವೆ. ಇಂಥವು ವಿಶ್ವಾಸಾರ್ಹವಾಗಿರುತ್ತವೆ.

ಪಾರ್ಲೆ ಗ್ಲುಕೋ ಬಿಸ್ಕಿಟ್‌ಗಳು ಮಾತ್ರ ಪ್ಯಾಕ್‌ನಲ್ಲಿಯೂ, ಬಿಡಿಬಿಡಿಯಾಗಿಯೂ ಮಾರಲ್ಪಡುತ್ತವೆ. ಇವನ್ನು ಬಿಡಿಯಾಗಿ ಕೊಳ್ಳುವಾಗ PARLE GLUCO ಬಿಸ್ಕಿಟ್ ಮೇಲಿದ್ದ ಅಕ್ಷರ ಸಂಯೋಜನೆಯನ್ನು ಪರೀಕ್ಷಿಸಿರಿ.

**ತಿಂದು ನೋಡಿರಿ**

ಕೊನೆಯದಾಗಿ ರುಚಿಯು ನಿಮಗೆ ಸತ್ಯ ಸಂಗತಿಯನ್ನು ಹೇಳುತ್ತದೆ. ನಮ್ಮನ್ನು ನಕಲು ಮಾಡುವವರು ಎಷ್ಟೇ ಪ್ರಯತ್ನಿಸಿ ನಮ್ಮ ಬಿಸ್ಕಿಟ್‌ನ ಹೊರ ಆಕಾರವನ್ನು ನಕಲು ಮಾಡಿದರೂ ಪಾರ್ಲೆಯ ರುಚಿ ಹಾಗೂ ಉತ್ತಮಿಕೆಯನ್ನು ಅವರು ನಕಲು ಮಾಡಲಾರರು.




**ತಮ್ಮ ತಮ್ಮ ಕ್ಷೇತ್ರಗಳಲ್ಲಿ ಭಾರತದಲ್ಲೇ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್‌ಗಳು**
**ಮೈಸುಟ್ಟುಕೊಂಡರೆ ನರಿಯು ಹುಲಿಯಾದೀತೇ; ನಕಲು ಬಿಸ್ಕಿಟ್ ಪಾರ್ಲೆಯಾದೀತೇ!**

**ಪಾರ್ಲೆ ಗ್ಲುಕೋ ಪಾರ್ಲೆ ಮೊನೆಕೊ ಪಾರ್ಲೆ ಕ್ರಾಕ್‌ಜಾಕ್**

everest/80/PP/341-kn